ಬೆಲೆ: ಎರಡು ಆಣೆ

ವರ್ಗಣಿ ದರ
( ಅಂಚೆವೆಚ್ಚ ಸೇರಿ )
ವರ್ಷಕ್ಕೆ ರೂ. ೬-೪-೦
೬ ತಿಂಗಳಿಗೆ ,, ೩-೪-೦
೩ ತಿಂಗಳಿಗೆ ,, ೧-೧೨-೦
ವ್ಹಿ. ಪಿ. ಮೂಲಕ
ತರಿಸಿಕೊಂಡಲ್ಲಿ ೫ ಆಣೆ
ಹೆಚ್ಚಿಗೆ ಬೀಳುವದು.

# ಕರ್ಮವೀರ

KARMAVEER
WEEKLY
HUBLI
SEPT. 23
1946

ಸಂಪಾದಕರು :
ಹ. ರಾ. ಪುರೋಹಿತ, ಎಂ. ಎ.

ಅಖಿಲ ಕರ್ನಾಟಕದಲ್ಲಿ ಅತ್ಯಂತ ಜನಪ್ರಿಯ ವಾರಪತ್ರಿಕೆ

Editor : H. R. Purohit, M. A.

ಸಂಪುಟ ೧೮ ] ಹುಬ್ಬಳ್ಳಿ ಸೋಮವಾರ ತಾರೀಖು ೨೩ — ೯ — ೧೯೪೬ [ ಸಂಚಿಕೆ ೨೯

# ನಡುಗಾಲ ಸರಕಾರದ ಸಮಸ್ಯೆಗಳು

## ಹಿಂದಿನ ಸರಕಾರ ಸಿದ್ಧಗೊಳಿಸಿದ ಸರಳ ಮಂಚ
## ಕ್ಷಣದಲ್ಲಿ ಸ್ವರ್ಗವನ್ನು ಭೂಮಿಗಿಳಿಸುವದು ಅಸಾಧ್ಯ
## ಜನತೆಯ ಸಹಕಾರದ ಅವಶ್ಯಕತೆ

ನಡುಗಾಲ ಸರಕಾರದ ಹೊಣೆಯನ್ನು ಹೊತ್ತ ಕಾಂಗ್ರೆಸ್ ನಾಯಕರೂ ಅವರೊಡನೆ ಸಹಕರಿಸಲನುವಾದ ಇತರ ಮಂತ್ರಿಗಳೂ ಮಹಾತ್ಮಾ ಗಾಂಧಿಯವರ ಶಬ್ದಗಳಲ್ಲಿ "ಮುಳ್ಳಿನ ಕಿರೀಟ"ವನ್ನು ಧರಿಸಿದ್ದಾರೆಂಬಲ್ಲಿ ಸಂದೇಹವಿಲ್ಲ. ಇನ್ನೂರು ವರ್ಷಗಳ ಬ್ರಿಟಿಶ ಆಳಿಕೆ ಮತ್ತು ಆರು ವರ್ಷಗಳ ಯುದ್ಧ ಇವುಗಳಿಂದ ಹಿಂದುಸ್ಥಾನಕ್ಕೆ ದೊರಕಿದ ಲಾಭಾಲಾಭದ ತೂಕ ಹೇಗೆಯೆ ಇರಲಿ, ಸ್ವಾತಂತ್ರ್ಯದ ಸಂಧಿಕಾಲದಲ್ಲಿ ಹೊಣೆಗೆ ಹೆಗಲಿತ್ತವರ ಪಾಲಿಗೆ ಅವು ಹಗುರಾದ ಸಮಸ್ಯೆಗಳನ್ನು ಬಿಟ್ಟಿಲ್ಲವೆಂದು ಯಾರಾದರೂ ಒಪ್ಪಬೇಕು. ನಡುಗಾಲ ಮಂತ್ರಿಗಳು ಒಡನೆ ಬಿಡಿಸಬೇಕಾದ ಅನೇಕಾನೇಕ ಗಡುಚಾದ ಸಮಸ್ಯೆಗಳಿವೆ. ಆದರೆ ಕ್ರಾಂತಿಯಿಂದ ಅಧಿಕಾರ ಸಂಪಾದಿಸಿದ ಸಂಧಿಕಾಲದ ನಾಯಕರಂತೆ ಅವರು ಉಗ್ರ, ಏಕಪಾಕ್ಷಿಕ ಕ್ರಿಯೆಗಳಿಂದ ಅವುಗಳನ್ನು ತುಡುಕುವಂತಿಲ್ಲ. ೧೯೩೫ ರ ಬ್ರಿಟಿಶ ಹಿಂದುಸ್ಥಾನ ಕಾಯಿದೆ, ವಾಯಿಸರಾಯರ ವಿಶೇಷಾಧಿಕಾರ ಮತ್ತು ಇತರ ಸಂಕೋಲೆಗಳು ಅವರನ್ನು ಉಗ್ರ ಪಥದಿಂದ ಪರಾಪ್ರತ್ತರಾಗಿ ಮಾಡದಿರವು.

### ಲೀಗ್ ಅಸಹಕಾರದ ಪರಿಣಾಮ

ಶಾಂತ ಚಿಂತನೆಯಿಂದ ಬಿರುಸಲ್ಲದ ಕಾರ್ಯಕ್ರಮವನ್ನು ಕೂಡ ನಡುಗಾಲ ಸರಕಾರ ಬಹಳ ಧೈರ್ಯದಿಂದ ಕೈಕೊಳ್ಳಲಾರದ ಸ್ಥಿತಿ ಇಂದು ದೇಶದಲ್ಲಿದೆ. ಮೊದಲನೆಯದಾಗಿ ಮುಸ್ಲಿಂ ಲೀಗು ಅಸಹಕಾರ ಮಾಡುವ ನಿರ್ಧಾರಕ್ಕೆ ಬಂದುದರಿಂದ ಅದು ಸಾರ್ವತ್ರಿಕ ಬೆಂಬಲದ ನಂಬಿಕೆ ಹಚ್ಚಿಕೊಳ್ಳಲಾರದು. ವಾಯಿಸರಾಯರೂ ಕಾಂಗ್ರೆಸ್ಸೂ ಲೀಗಿಗೆ ಒಳಬರಲು ಯಾವಾಗಲೂ ಬಾಗಿಲು ತೆರೆದಿಟ್ಟಿರುವುದರ ರಾಜಕೀಯ ಸಾಧಕಗಳೇನೇ ಇರಲಿ, ಅದು ನಡುಗಾಲ ಸರಕಾರದಲ್ಲಿ ಇಬ್ಬಗೆಯ ಅನಿಶ್ಚಿತತೆಯನ್ನು ತಂದೊಡ್ಡಿದೆ. ಮೊದಲನೆಯದಾಗಿ ಈಗ ಕಾರ್ಯಪ್ರವೃತ್ತರಾದ ಮಂತ್ರಿಗಳಲ್ಲಿ ಯಾರಿಲ್ಲೆಂದರೂ ಮುಸ್ಲಿಂ ಮಂತ್ರಿಗಳು ಯಾವಾಗ ತಾವು ಲೀಗ್ ಸದಸ್ಯರಿಗೆ ಸ್ಥಳ ತೆರವು ಮಾಡಿಕೊಟ್ಟು ಹೋಗಬೇಕಾಗುವದೋ ಎಂದು ಸಾಶಂಕರಾಗಿರುವದರಿಂದ ಒಮ್ಮನಸಿನಿಂದ ಅವರು ಭವಿಷ್ಯತ್ತಿನಲ್ಲಿ ಕಣ್ಣು ನಡಲಾರರು. ಇನ್ನು ಮಂತ್ರಿಮಂಡಲ ಒಟ್ಟಾಗಿಯಾದರೂ ಗಟ್ಟಿಯಾದ ಧೋರಣೆಯನ್ನು ಅನುಸರಿಸಬಲ್ಲದೋ ಎಂಬುದೂ ಸಂದೇಹಾಸ್ಪದ. ಏಕೆಂದರೆ ಲೀಗ್ ನಾಯಕರು ಬಯಸಿದಾಗ ಮಂತ್ರಿಮಂಡಲದಲ್ಲಿ ಸೇರಬಲ್ಲರು. ಮತ್ತು ಅವರಿಗೆ ಪ್ರಮುಖ ಖಾತೆಗಳಲ್ಲಿ ಅರೆವಾಸಿಯನ್ನು ಹಂಚುವ ವಾಗ್ದಾನದಿಂದ ವಾಯಿಸರಾಯರು ಬದ್ಧರಾಗಿದ್ದಾರೆ. ಅವರೊಡನೆ ಹೊಂದಿಕೊಂಡು ಹೋಗಬೇಕಾದರೆ ಧೋರಣೆಯಲ್ಲಿ ಮಹತ್ವದ ಬದಲಾವಣೆಗಳನ್ನು ಮಾಡಬೇಕಾಗಿ ಬಂದೀತು. ಮೇಲಾಗಿ ಕಾಂಗ್ರೆಸ್ಸಿನ ಧ್ಯೇಯಗಳಿಗೂ ಲೀಗ್ ಧ್ಯೇಯಗಳಿಗೂ ಬಹಳ ಅಂತರವುಂಟು. ಹೀಗಾಗಿ ಲೀಗು ಒಳಗೆ ಬಂದರೆ, ಬಂದಾಗ ಕೂಡ, ಕಾಲಹರಣವಿಲ್ಲದೆ ನಡುಗಾಲ ಸರಕಾರ ಮುನ್ನುಗ್ಗೀತೆಂಬ ಆಸೆ ಹಿಡಿಯುವದು ಕಠಿನ. ಎಲ್ಲಕ್ಕಿಂತ ಹೆಚ್ಚಾಗಿ ಅದರ ತಾತ್ಪೂರ್ತಿಕ ಸ್ವರೂಪವೇ ದೀರ್ಘಕಾಲದ ಯೋಜನೆಗಳನ್ನು ಅದರ ಕೈಗೆ ನಿಲುಕದ್ದನ್ನಾಗಿ ಮಾಡುವದು.

ಹೀಗೆ ನಮ್ಮ ಮಮತೆಯ ಧುರೀಣರೇ ಇಂದು ಹಿಂದುಸ್ಥಾನದ ಡೋಣಿಯನ್ನು ನಡೆಸುವ ಭಾರ ಹೊತ್ತಿದ್ದರೂ ಪರಿಸ್ಥಿತಿಯನ್ನು ಕಣ್ಮುಚ್ಚಿ ತೆರೆಯುವಷ್ಟರಲ್ಲಿ ಹದಕ್ಕೆ ತಂದು ಸ್ವರ್ಗವನ್ನೆ ಭೂಮಿಗಿಳಿಸುವರೆಂಬ ಆಸೆ ಹಚ್ಚಿಕೊಂಡರೆ ನಾವು ನಿರಾಶರಾಗಬೇಕಾದೀತು. ಸ್ವಾತಂತ್ರ್ಯವೆಂಬುದು ಮಕ್ಕಳಾಟಿಕೆಯಲ್ಲ, ಬೆನ್ನು ಮುರಿಯುವ ಹೊರೆ ಪ್ರಬುದ್ಧಾವಸ್ಥೆಗೆ ಮುಟ್ಟಿರುವ ಹಿಂದೀ ರಾಷ್ಟ್ರ ಇದನ್ನು ಅರಿತುಕೊಂಡು ಈ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸಿ ತೋರಲು ಮುಂದಾಳುಗಳಿಗೆ ನೆರವಾಗಬೇಕು. ಅವರಿಗೆ ನಮ್ಮ ಬೆಂಬಲ ಎಷ್ಟು ಹೆಚ್ಚು ದೊರೆಯುವದೋ ಅಷ್ಟು ಧೈರ್ಯದಿಂದ ಅವರು ಮುಂದಡಿಯಿಡಬಲ್ಲರು. ನಮ್ಮ ಮುಂದಾಳುಗಳ ಸಾಮರ್ಥ್ಯ ನಾವೆಲ್ಲರೂ ಸೇರಿ ಅವರ ಮುಂಗೈಯಲ್ಲಿ ತುಂಬಿದ್ದಕ್ಕಿಂತ ಒಂದಿನಿಸು ಹೆಚ್ಚಾಗಿರಲಾರದೆಂಬ ಮಾತನ್ನು ನಾವು ಮರೆಯತಕ್ಕದ್ದಲ್ಲ.

### ಮುಖ್ಯ ಸಮಸ್ಯೆಗಳು

ಇಷ್ಟನ್ನು ನೆನಪಿನಲ್ಲಿಟ್ಟುಕೊಂಡು ನಾವು ನಡುಗಾಲದ ಸರಕಾರದ ಮುಂದಿರುವ ಸಮಸ್ಯೆಗಳನು ಸೂಕ್ಷ್ಮವಾಗಿ ಪರಿಶೀಲಿಸೋಣ. ನಡುಗಾಲ ಸರಕಾರವನ್ನು ಎದುರಿಸಿರುವ ಸಮಸ್ಯೆಗಳಲ್ಲಿ ಶಾಂತಿ ಸುವ್ಯವಸ್ಥೆಗಳ ರಕ್ಷಣೆಗೇ ಎಲ್ಲಕ್ಕಿಂತ ಮಹತ್ವದ ಸ್ಥಾನವಿದೆ. ದೇಶದಲ್ಲೆಲ್ಲ ಹಬ್ಬಿರುವ ಜಾತೀಯ ಸ್ವರೂಪದ ಮಾತ್ರವಲ್ಲ, ಆರ್ಥಿಕ ಕಲಹದ ಹೊಟ್ಟೆಯೊಳಗೆ ಅವಿತಿರುವ ರಾಜಕೀಯ ಗಲಭೆಗಳನ್ನು ಹತ್ತಿಕ್ಕಿದ ಹೊರತು ಯಾವದೇ ಬಗೆಯ ಪ್ರಗತಿ ಸಾಧ್ಯವಿಲ್ಲ. ಕಲಕತ್ತೆಯಲ್ಲಿಯೂ ಬೇರೆಡೆಗಳಲ್ಲಿಯೂ ನಡೆದ ಭೀಕರ ದುರಂತಗಳ ನಂತರ ಈ ಮಾತಿಗೆ ಬೇರಾವ ಪ್ರಮಾಣವನ್ನು ಒದಗಿಸುವದೇ ಅವಶ್ಯವಿಲ್ಲ. ಶಾಂತಿ ಸುವ್ಯವಸ್ಥೆಗಳ ಹೊಣೆ ಮುಖ್ಯವಾಗಿ ಪ್ರಾಂತಿಕ ಸರಕಾರಗಳಿಗೆ ಸೇರಿದ್ದು ನಿಜ. ಆದರೆ ಬಹುಸಂಖ್ಯಾಕ ಪ್ರಾಂತಗಳಲ್ಲಿ ಕಾಂಗ್ರೆಸು ಅಧಿಕಾರದಲ್ಲಿರುವ ಕಾರಣ ಎಲ್ಲ ಪ್ರಾಂತಿಕ ಪ್ರಮುಖರನ್ನು ಒಂದೆಡೆಗೆ ಸೇರಿಸಿ ಗಲಭೆಗಳನ್ನು ಹತ್ತಿಕ್ಕಲು ಪರಸ್ಪರ ಸಹಕಾರದ ಧೋರಣವನ್ನು ಗೊತ್ತುಪಡಿಸುವದು ಒಳಿತೆಂದು ತೋರುತ್ತದೆ. ಇಂಥ ಸಹಕಾರ ಈ ವರೆಗೂ ಇಲ್ಲ. ವಿದೇಶೀ ಸರಕಾರವೊಂದು ಕೇಂದ್ರದಲ್ಲಿರುವಷ್ಟು ದಿನ ಪ್ರಾಂತಿಕ ಸ್ವಾಯತ್ತತೆಗಳು ತಮ್ಮಲ್ಲಿದ್ದ ಅಧಿಕಾರಗಳನ್ನು ಕೇಂದ್ರಕ್ಕೆ ಬಿಟ್ಟುಕೊಡುವದು ವಿಹಿತವೂ ಆಗಿದ್ದಿಲ್ಲ. ಆದರೆ ಈಗ ಈ ಪರಿಸ್ಥಿತಿ ಉಳಿದಿಲ್ಲವಾಗಿ ಪ್ರಾಂತಗಳು ಶಾಂತಿ ಸುವ್ಯವಸ್ಥೆಗೆ ಸಂಬಂಧಿಸಿದ ಕೆಲ ಅಧಿಕಾರಗಳನ್ನು ತಾವಾಗಿಯೆ ಕೇಂದ್ರಕ್ಕೆ ಬಿಟ್ಟುಕೊಟ್ಟು ಅಖಿಲ ಭಾರತ ಸ್ವರೂಪವನ್ನು ತಳೆಯುವಂತೆ ತೋರುತ್ತಿರುವ ಸಂಘಟಿತ ದೌರ್ಜನ್ಯಕ್ಕೆ ಶಾಸ್ತಿ ಮಾಡುವದು ಸುಲಭವಾದೀತೆಂದು ಕೆಲವೆಡೆಗಳಲ್ಲಿ ಸೂಚಿಸಲ್ಪಡುತಿದೆ. ಗೃಹಖಾತೆಯನ್ನು ತೆಗೆದುಕೊಂಡಿರುವ ಉಕ್ಕಿನ ಮನುಷ್ಯ ಸರದಾರ ಪಟೇಲರು ಸಮಸ್ತ ಭಾರತದ ಶಾಂತಿಸಮಾಧಾನಗಳ ಹೊಣೆಯನ್ನು ನಿರ್ವಹಿಸಲು ತಕ್ಕವರೇ ಸರಿ.

### ಅನ್ನವಸ್ತ್ರ

ಶಾಂತಿ ಸಮಾಧಾನಗಳಷ್ಟು ನೆಲಸಿದವೆಂದರೆ ಇತರ ಮಹತ್ವದ ಸಮಸ್ಯೆಗಳ ಕಡೆ ನಡುಗಾಲ ಸರಕಾರ ಚಿಂತೆಬಿಟ್ಟು ಗಮನವೀಯಬಹುದು. ಪಂಡಿತ ನೆಹರು ತಮ್ಮ ಪತ್ರಿಕಾ ಪರಿಷತ್ತಿನಲ್ಲಿ ಹೇಳಿರುವಂತೆ ಈ ಸಮಸ್ಯೆ "ಭಾರತದ ೪೦ ಕೋಟಿಯನ್ನು ಉಣಿಸಿ, ಉಡಿಸಿ, ಮನೆ ಕೊಟ್ಟು, ವಿದ್ಯೆ ನೀಡಿ, ಹೆಚ್ಚು ಆರೋಗ್ಯಕರ ಜೀವನ ಪರಿಸ್ಥಿತಿಯನ್ನುಂಟುಮಾಡುವದು." ಇದರಲ್ಲಿ ಆಹಾರದ ಸಮಸ್ಯೆಯೇ ಎಲ್ಲಕ್ಕೂ ಗಿಡುಚು. ಪ್ರಾಂತ-ಪ್ರಾಂತಗಳಲ್ಲಿ ಪರಸ್ಪರ ಸಹಕಾರವಿಲ್ಲದೆ ಈ ಸಮಸ್ಯೆಯನ್ನು ಬಗೆಹರಿಸುವದು ಎಂಥ ಅಶಕ್ಯ ಸಂಗತಿಯೆಂಬುದನ್ನು ಯುದ್ಧಕಾಲದಲ್ಲಿ ತಲೆದಂಡ ತೆತ್ತು ನಾವು ಕಲಿತಿದ್ದೇವೆ. ಜಗತ್ತಿನಲ್ಲೆಲ್ಲ ಬರಗಾಲ ಬಿದ್ದಿರುವ ಈ ಕಾಲದಲ್ಲಿ ವಿದೇಶಗಳಿಂದ ಆಹಾರ ತರಿಸುವದರಲ್ಲಿ ಸರಕಾರ ಎಷ್ಟು ಸಮರ್ಥವಾಗುವದೋ ಹೇಳಲಾಸಲ್ಲ. ಆದುದರಿಂದ ವಿಶೇಷಾಧಿಕಾರಗಳನ್ನು ತೆಗೆದುಕೊಂಡಾದರೂ ದೇಶದೊಳಗಿನ ಪೂರೈಕೆ ಪರಿಸ್ಥಿತಿಯನ್ನು ಹಿಡಿತದಲ್ಲಿಟ್ಟುಕೊಳ್ಳಲು ಸರಕಾರ ಮುಂದಾಗಬೇಕಾದೀತು. ಮುಸ್ಲಿಂಲೀಗ ಪ್ರಾಂತಗಳಿಂದ ರಾಜಕೀಯ ಕಾರಣಗಳಿಗಾಗಿ ಆಹಾರ ವಿಷಯದಲ್ಲಿ ಅಡ್ಡಗಾಲು ಬರುವ ಸಂಭವವುಂಟು. ಕೆಲ ಲೀಗ ಮುಂದಾಳುಗಳು ಇಂಥ ಉದ್ದೇಶವನ್ನು ಬಹಿರಂಗವಾಗಿ ಆಡಿ ತೋರಿದ್ದೂ ಉಂಟು. ಮುಸ್ಲಿಂ ಲೀಗು ಸರಕಾರದಲ್ಲಿ ಸೇರುವ ವರೆಗಂತೂ ಈ ವಿಷಯದಲ್ಲಿ ತೊಂದರೆಯನ್ನು ಖಂಡಿತವಾಗಿ ನಿರೀಕ್ಷಿಸಬೇಕು.

ವಸ್ತ್ರದ ಪರಿಸ್ಥಿತಿಯಾದರೂ ಕಡಿಮೆ ತೊಡಕಿನದಾಗಿಲ್ಲ. ನೂಲಿನ ಧಾರಣೆಯ ಸಮಸ್ಯೆ ಬಹಳ ಕಠಿನವಾದುದು. ಗಿರಣಿಯೊಡೆಯರು ಧಾರಣೆಯೇರಿಸಲು ಆತುರರಾಗಿದ್ದಾರೆ. ಆದರೆ ಬಡವನ ಹಿತದೃಷ್ಟಿ ಇದಕ್ಕೆ ಅಡ್ಡಿ ಬರುತ್ತದೆ. ಅಲ್ಲಲ್ಲಿ ತಲೆದೋರುತಿರುವ ಸಂಪುಗಳಿಂದ ಸಾರಿಗೆಯ ಪ್ರಶ್ನೆಯು ತೊಡಕೂ ಹೆಚ್ಚಿದೆ. ನಾಗರಿಕ ಪೂರೈಕೆ ಮಂತ್ರಿಗಳಾದ ರಾಜಗೋಪಾಲಾಚಾರಿಯವರ ಕೆಲಸ ಸರಳವಲ್ಲ. ಆದರೆ ಕುಶಲರಾದ ಅವರು ಅದನ್ನು ಯಶಸ್ವಿಯಾಗಿ ನಿರ್ವಹಿಸುವರೆಂದು ನಂಬಬಹುದು.

ವಸತಿ ಸೌಕರ್ಯದ ಪ್ರಶ್ನೆ ಹಳ್ಳಿ—ನಗರಗಳೆರಡರಲ್ಲೂ ತೀರ ವಿಕೋಪಕ್ಕೆ ಹೋಗಿದೆ. ಯೋಗ್ಯವಾದ ವಸತಿ ಯೋಜನೆಯನ್ನು ಕೈಕೊಂಡರೆ ಅದರಿಂದ ಬರಲಿರುವ ನಿರುದ್ಯೋಗ ಸಮಸ್ಯೆಗೂ ಸಿದ್ಧವಾದ ಉತ್ತರವನ್ನು ಮಾಡಿಟ್ಟಂತಾಯಿತು. ನಿರೋಗಿ ಜೀವನ ಪರಿಸ್ಥಿತಿ ಹಬ್ಬಬೇಕಾದರೆ ಈ ಪ್ರಶ್ನೆಯನ್ನು ಬದಿಗಿರಿಸದೆ ಜಾಗ್ರತೆ ಬಿಡಿಸುವದವಶ್ಯ. ಶಿಕ್ಷಣದ ಮಾತಂತೂ ಸರ್ವವಿದಿತವಾದುದು. ಈ ದೇಶದ ದುರ್ದೈವಗಳಲ್ಲಿ ಇಲ್ಲಿನ ಅಜ್ಞಾನ, ನಿರಕ್ಷರತೆಗಳಿಗಿಂತ ದೊಡ್ಡದು ಬೇರೊಂದಿಲ್ಲ. ಸರ್ವತ್ರ ಪ್ರಚಲಿತವಾಗಿರುವ ಜಾತೀಯ ದಂಗೆಗಳಿಗೆ ವಿದ್ಯಾಪ್ರಸಾರವೊಂದೇ ಸಮರ್ಪಕವೂ ಶಾಶ್ವತವೂ ಆದ ಉತ್ತರವಾಗಬಲ್ಲದು. ಅಜ್ಞಾನಿ ಜನಕೋಟಿಯ ಮಧ್ಯದಲ್ಲಿ ಪ್ರಜಾತಂತ್ರ ಅರ್ಥವಿಲ್ಲದ ಬುರುಡೆಯೆನಿಸುತ್ತದೆ.

### ಆರ್ಥಿಕ ಸಮಸ್ಯೆಗಳು

ಆದರೆ ಹಣವೇ ಎಲ್ಲಕ್ಕೂ ಮೂಲವಾಗಿರುವದರಿಂದ ಆರ್ಥಿಕ ಧೋರಣೆಯ ಸಮಂಜಸತೆ ಅಸಮಂಜಸತೆಗಳನ್ನೇ ನಡುಗಾಲ ಸರಕಾರದ ಯಶಸ್ಸು ಅಪಯಶಸ್ಸು ಅವಲಂಬಿಸಿದೆ. ಈ ವಿಷಯದಲ್ಲಿ ಹಿಂದುಸ್ಥಾನ ಸರಕಾರದ ಈ ವರೆಗಿನ ಧೋರಣೆ ಸ್ವತಂತ್ರ ಭಾರತದ ಮಂತ್ರಿಗಳಿಗೆ ಸರಳ ಮಂಚವನ್ನೇ ಸಿದ್ಧಮಾಡಿಟ್ಟದೆಯೆಂದರೆ ತಪ್ಪಾಗದು. ಯುದ್ಧ ಮುಗಿದು ವರ್ಷ ಕಳೆದಿದ್ದರೂ ಬೆಲೆಗಳ ಮಟ್ಟ ಇಳಿಯದಾಗಿದೆ. ಜೀವನದ ಅವಶ್ಯಕತೆಗಳ ಕೊರತೆ ಯುದ್ಧ ಕಾಲದಷ್ಟೇ ಭಯಂಕರವಾಗಿದೆ. ಯುದ್ಧ ಕಾಲದಲ್ಲಿ ಬೆಲೆಗಳ ಏರಿಕೆಯನ್ನು ತಡೆಯಲು ಮೊದಲು ಪ್ರಯತ್ನಗಳೇ ನಡೆಯಲಿಲ್ಲ. ಅತಿಪ್ರಸರಣ ಸ್ಥಿತಿಯನ್ನು ಕಂಡು ಹಿಡಿದು ಅರ್ಥಶಾಸ್ತ್ರಜ್ಞರು ಎಚ್ಚರಿಕೆ ಕೊಟ್ಟರೂ ಗಣಿಸದೆ ಅದರ ಇರವನ್ನೇ ನಿರಾಕರಿಸಲಾಯಿತು. - ಇದರಿಂದ ಶ್ರೀಮಂತರಿಗೆ ಅನುಕೂಲವಾಗಿ ಅವರು ಬೇಕುಬೇಕಾದಂತೆ ಹಣ ಶೇಖರಿಸಲು ಅವಕಾಶ ದೊರೆತದ್ದರಿಂದ ಅವರು ಸರಕಾರದ ಅತಿಪ್ರಸರಣ ಧೋರಣೆಗೆ ಬೆಂಬಲವಿತ್ತರು. ಅತಿಪ್ರಸರಣದ ಪಿಡುಗು ಕುರುಡರಿಗೂ ಕಾಣುಸುವಷ್ಟು ಭೂತಾಕಾರವಾಗಿ ಬೆಳೆದಾಗ ಸರಕಾರ ಎಚ್ಚತ್ತಂತೆ ಮಾಡಿ ಅದಕ್ಕೆ ವಿವಿಧ ನಿಯಂತ್ರಣಗಳ ಮೂಲಕ ತಡೆ ಹಾಕಲು ಪ್ರಯತ್ನವನ್ನು ಕೈಕೊಂಡಾಗ ಅಗಲೆ ಪರಿಸ್ಥಿತಿ ಹದಮೀರಿ ಪ್ರತಿಬಂಧೋಪಾಯಗಳ ಪರಿಣಾಮ ಆಗಬೇಕಾದಷ್ಟು ಆಗಲಿಲ್ಲ.

ಯುದ್ಧ ಕಾಲದ ಮಾತು ಒತ್ತಟ್ಟಿಗಿರಲಿ. ಯುದ್ಧ ಮುಗಿದ ನಂತರವೂ ಹಿಂದುಸ್ಥಾನ ಸರಕಾರದ ಧೋರಣೆ ಈ ಬೆಲೆಗಳ ಏರಿಕೆಯನ್ನು ತಡೆಯಲು ಯತ್ನಿಸಲಿಲ್ಲ. ಬದಲಾಗಿ ಯುದ್ಧ ಮುಗಿದೊಡನೆ ಮುಗ್ಗಟ್ಟು ತಲೆದೋರಿ ಬೆಲೆಗಳು ಕುಸಿದು ಭಯಂಕರ ಪರಿಣಾಮವಾದೀತೆಂಬ ದಲ ಅರ್ಥಶಾಸ್ತ್ರಜ್ಞರ ಮತವನ್ನು ನಂಬಿ ಬೆಲೆಗಳ ಕುಸಿತವನ್ನು ತಡೆಗಟ್ಟುವ ಉದ್ಯೋಗವನ್ನೇ ಸರಕಾರ ನಡೆಸಿತು. ೧೯೪೬—೪೭ ರ ಮುಂಗಡಪತ್ರಿಕೆಯಲ್ಲಿ ಇದಕ್ಕೋಸ್ಕರ ೫೦ ಲಕ್ಷ ರೂಪಾಯಿ ತೆಗೆದಿಡಲಾಯಿತು ಕೂಡ. ಯುದ್ಧ

—೬ ನೇ ಪುಟ ನೋಡಿರಿ

## ಪುಸ್ತಕ ಮತ್ತು ವಿಮರ್ಶೆ

### ಪಾಕಿಸ್ತಾನದ ಹೂಲಿ

ಬರೆದವರು:- ಶ್ರೀ ಬಾ. ಯ. ದೇಶಪಾಂಡೆ (ಅಣ್ಣಾಗುರೂಜಿ) ಧಾರವಾಡ ಮಿಂಚಿನ ಬಳ್ಳಿಯ ೮ ನೇ ವರ್ಷದ ೪ ನೇ ಕುಡಿ. ಕ್ರೌನ ಅಷ್ಟಪತ್ರದ ೧೮೪ ಪುಟಗಳು. ಬೆಲೆ ೨—೮—೦ ಮಿಂಚಿನ ಬಳ್ಳಿಯ ಚಾವಡಿ ಧಾರವಾಡ.

ಪಾಕಿಸ್ತಾನದ ಸಮಸ್ಯೆ ಅತ್ಯಂತ ಜಟಿಲವಾಗಿದೆ. ಪಾಕಿಸ್ತಾನದಿಂದ ಮುಸಲ್ಮಾನರಿಗೇ ಹೆಚ್ಚು ಹಾನಿಯಿದೆಯೆಂಬುದಾಗಿ ವಿಚಾರವಂತ ಮುಸಲ್ಮಾನರು ಈಗಲೂ ಒಪ್ಪುತಿರುವರು. ಆದರೂ ಬ್ಯಾ. ಜಿನ್ನಾ ಮತ್ತು ಅವರ ಅನುಯಾಯಿಗಳಾದ ಮುಸ್ಲಿಂ ಲೀಗಿನವರು ಅದನ್ನು ಪಡೆದೆ ತೀರುವುದಾಗಿ ಅಗ್ರಹ ತಾಳಿರುವರು. ಹಿಂದುಸ್ತಾನದ ಸ್ವಾತಂತ್ರ್ಯ ಮಾರ್ಗದಲ್ಲಿ ಪಾಕಿಸ್ತಾನ ಎಷ್ಟೊಂದು ಅಡ್ಡಿ ಅಡಚಣೆಗಳನ್ನುಂಟು ಮಾಡಹತ್ತಿದೆಂಬುದು ಅನುಭವದ ಮಾತಾಗಿದೆ. ಈ ಪರಿಸ್ಥಿತಿಯಲ್ಲಿ ಅ ಸಮಸ್ಯೆಯ ತಿರುಳನ್ನು ತಿಳಿದುಕೊಳ್ಳುವದು ಪ್ರತಿಯೊಬ್ಬ ಹಿಂದೂ ಮುಸಲ್ಮಾನನ ಕರ್ತವ್ಯವಾಗಿದೆ. ಕನ್ನಡದಲ್ಲಿ ಇಂಥ ಪುಸ್ತಕವಿದ್ದಿರಲಿಲ್ಲ. ಶ್ರೀ ಅಣ್ಣಾಗುರೂಜಿಯವರು ಈ ವಿಷಯವನ್ನು ಕಾರ್ಯಕರ್ತರ ದೃಷ್ಟಿಯಿಂದ ವಿಚಾರ ಮಾಡಿ ಅದರಿಂದ ಜನಸಾಮಾನ್ಯರಿಗೆ ಆಗುವ ಅಹಿತವನ್ನು ವಿವರಿಸಿದ್ದಾರೆ. ನಮ್ಮ ಕರ್ನಾಟಕಕ್ಕಂತೂ ಪಾಕಿಸ್ತಾನದ ಸಂಬಂಧ ಬರುವುದೇ ಇಲ್ಲ. ಜಿನ್ನಾರವರೂ ಕರ್ನಾಟಕ ಮುಂತಾದ ಅಲ್ಪ ಸಂಖ್ಯಾಕ ಮುಸಲ್ಮಾನರ ಪ್ರಾಂತಗಳಿಗೆ ಪಾಕಿಸ್ತಾನ ಬೇಡುತಿರುವುದಿಲ್ಲ. ಈ ಪರಿಸ್ಥಿತಿಯಲ್ಲಿ ಕರ್ನಾಟಕದಲ್ಲಿಯ ಮುಸಲ್ಮಾನರು ತಮ್ಮ ಕರ್ತವ್ಯವಾವುದೆಂಬುದನ್ನು ತಿಳಿದುಕೊಳ್ಳುವದವಶ್ಯವಾಗಿದೆ. ಮುಸ್ಲಿಂ ಲೀಗಿನವರ ಈ ಪಾಕಿಸ್ತಾನದ ಕೂಗಿನಿಂದ ಪರಕೀಯರ ಸತ್ತೆ ಇಲ್ಲಿ ಆಳವಾಗಿ ಬೇರೂರುತಿದೆಂಬುದು ನಿರ್ವಿವಾದ. ಇದೆಲ್ಲವನ್ನು ಶ್ರೀ ಅಣ್ಣಾಗುರೂಜಿಯವರು ಮಾರ್ಮಿಕ ರೀತಿಯಿಂದ ಮತ್ತು ಹುರುಪಿನ ಭಾಷೆಯಲ್ಲಿ ಬರೆದಿದ್ದಾರೆ. ಕರ್ನಾಟಕಸ್ಥರು ಈ ಪುಸ್ತಕವನ್ನೋದಿ ಪಾಕಿಸ್ತಾನದ ಜಟಿಲ ಸಮಸ್ಯೆಯನ್ನು ಅರಿತುಕೊಂಡು ಕಾರ್ಯಪ್ರವೃತ್ತರಾಗಬೇಕು. ಅಂದರೆ ಗ್ರಂಥಕರ್ತರ ಮತ್ತು ಪ್ರಕಾಶಕರ ಶ್ರಮ ಸಾರ್ಥಕವಾಗುವದು.

### ರಾಜನೀತಿಶಾಸ್ತ್ರ

ಲೇ. ಕೃಷ್ಣಾಚಾರ್ಯ ಜೋಷಿ ಎಡ್ವೊಕೇಟ ಹೈದರಾಬಾದ. ಪ್ರಕಾಶಕರು ಹೈದರಾಬಾದ ಸಂಸ್ಥಾನ ಕರ್ನಾಟಕ ಪರಿಷತ್ತು ಹೈದರಾಬಾದ ದಕ್ಷಿಣ. ಕ್ರೌನ ಅಷ್ಟಪತ್ರದ ೨೦೦ ಪುಟಗಳು. ಬೆಲೆ ೩—೦—೦

ಕನ್ನಡದಲ್ಲಿ ರಾಜನೀತಿ ಶಾಸ್ತ್ರವನ್ನು ಪ್ರತಿಪಾದಿಸುವ ಪುಸ್ತಕಗಳು ತೀರ ಅಪರೂಪ. ಶ್ರೀ ಕೃಷ್ಣಾಚಾರ್ಯರು ಈ ವಿಷಯವನ್ನು ಅಭ್ಯಸಿಸಿ ಇನ್ನೂರು ಪುಟಗಳಷ್ಟು ದೊಡ್ಡ ಪುಸ್ತಕವನ್ನು ಬರೆದು ಪ್ರಸಿದ್ಧಿಸಿದ್ದು ಅಭಿನಂದನೀಯವಾಗಿದೆ. ಇದರಲ್ಲಿ ರಾಜ್ಯದ ತತ್ವವಾದದಿಂದ ಪ್ರಾರಂಭಿಸಿ ಮಾನವನ ಮೂಲಭೂತ ಹಕ್ಕುಗಳು ಶಾಸನ, ರಾಜ್ಯದ, ಆಧುನಿಕ ತತ್ವವಾದಗಳು ಭಾರತೀಯ ರಾಜನೀತಿ ರಾಜ್ಯಪದ್ಧತಿಗಳು ಪೂರ್ವಾರ್ಧದಲ್ಲಿ ವಿವರಿಸಿದ್ದಾರೆ. ರಾಜ್ಯದ ಪ್ರಕಾರ, ಘಟನೆ ಮತ್ತು ಐಕ್ಯ, ರಾಜ್ಯತಂತ್ರದ ವಿಭಾಗಗಳು, ಸಂಘಟಿತ ರಾಜ್ಯಪದ್ಧತಿಯನ್ನು ವಿವರಿಸಿ ಇಂಗ್ಲಂಡಿನ ಪ್ರಭುತ್ವ ಹಿಂದುಸ್ತಾನದ ಪ್ರಭುತ ಮತ್ತು ಹೈದರಾಬಾದಿನ ಪ್ರಭುತ್ವಗಳನ್ನು ಉತ್ತರಾರ್ಧದಲ್ಲಿ ವಿವರಿಸಿರುವರು. ಪರಿಶಿಷ್ಟಗಳಲ್ಲಿ ವೇವೆಲ್‌ಯೋಜನೆ, ರಾಜಕೀಯ ಶಬ್ದಕೋಶ ಪಾರಿಭಾಷಕ ಶಬ್ದಗಳನ್ನು ಕೊಟ್ಟು ಪುಸ್ತಕವನ್ನು ಮತ್ತಷ್ಟು ಉಪಯುಕ್ತ ಮಾಡಿರುವರು. ಹಿಂದುಸ್ತಾನವು ಇದೀಗ ಹೊಸ ಘಟನೆಯನ್ನು ಸಿದ್ಧಪಡಿಸುವಲ್ಲಿ ತೊಡಗಿದೆ. ಹಿಂದುಸ್ತಾನದ ರಾಜ್ಯಘಟನೆಯೆಂತಿರಬೇಕೆಂದನ್ನು ನಾಡಿನ ಹಿರಿಯರು ನಿರ್ಧರಿಸಲಿರುವರು. ಈ ಸಮಯದಲ್ಲಿ ರಾಜನೀತಿ ಶಾಸ್ತ್ರದ ಬಗ್ಗೆ ಇಷ್ಟೊಂದು ಮಹತ್ವದ ವಿಷಯಗಳನ್ನೊಳಗೊಂಡ ಪುಸ್ತಕ ಪ್ರಸಿದ್ಧವಾದುದು ಅತ್ಯಂತ ಉಚಿತವಾಗಿದೆ. ಕನ್ನಡಿಗರು ಈ ಪುಸ್ತಕವನ್ನು ತರಿಸಿಕೊಂಡು ಓದಿ ರಾಜನೀತಿಶಾಸ್ತ್ರವನ್ನು ತಿಳಿದುಕೊಳ್ಳುವುದಲ್ಲದೆ ಗ್ರಂಥಕರ್ತರನ್ನೂ ಪ್ರೋತ್ಸಾಹಿಸಬೇಕು. ಹೈದರಾಬಾದಿನಲ್ಲಿ ಕನ್ನಡಕ್ಕೆ ಅಷ್ಟೊಂದು ಪ್ರೋತ್ಸಾಹವಿಲ್ಲದಿರುವಾಗ ಅಲ್ಲಿನ ಕರ್ನಾಟಕ ಸಂಘದವರು ಕನ್ನಡ ಪ್ರಚಾರ ಕಾರ್ಯ ಕೈಕೊಂಡು ಇಂಥ ಉಪಯುಕ್ತ ಪುಸ್ತಕಗಳನ್ನು ಪ್ರಸಿದ್ಧಿಸುತಿರುವದು ಅಭಿನಂದನೀಯವಾಗಿದೆ.

### ಸಭಾಶಾಸ್ತ್ರ

ಸಭೆಗಳ ಕಾಯಿದೆ ಮತ್ತು ಕಾರ್ಯಪದ್ಧತಿ ವಿವೇಚನ ವಿಭಾಗ, ನಿಯಮ ವಿಭಾಗ ಲೇ. ಶಂಕರರಾವ ಜೋಶಿ ವಕೀಲ ಬೆಳಗಾವಿ ಡೆಮಿ ಅಷ್ಟಪತ್ರದ ೧೨೦ ಪುಟಗಳು. ಬೆಲೆ ೨—೮—೦ ಪ್ರಕಾಶಕರು ಎಸ್. ಡಿ. ಜೋಶಿ ವಕೀಲ ನ್ಯಾಯದೀಪ ಮಂದಿರ ಬೆಳಗಾವಿ

ಶ್ರೀ ಜೋಶಿಯವರು ಕಳೆದ ವರ್ಷ ಪ್ರಸಿದ್ಧಿಸಿದ ಮರಾಠಿ ಪುಸ್ತಕದ ಅನುವಾದವನ್ನು ಶ್ರೀ ವಿ. ವಿ. ದೀಕ್ಷಿತ ವಕೀಲರು ಮಾಡಿರುವರು. ಸಾರ್ವಜನಿಕ ಸಭೆಗಳನ್ನೆಂತು ನಡೆಸಬೇಕೆಂಬ ಬಗ್ಗೆ ವಿಶಿಷ್ಟ ಕಾಯಿದೆಗಳಿಲ್ಲ. ಆದರೆ ಬ್ರಿಟಿಶ್ ಪಾರ್ಲಮೆಂಟನಲ್ಲಿ ಮತ್ತು ಉಳಿದ ಕಡೆ ಅನುಸರಿಸುತ್ತ ಬಂದ ರೀತಿಯಲ್ಲಿಯೇ ಈಗ ಸಭೆಗಳನ್ನು ಎಲ್ಲೆಡೆ ನಡೆಸಲಾಗುತ್ತದೆ. ಈ ಸಂಬಂಧದಲ್ಲಿ ಹಲವಾರು ಪುಸ್ತಕಗಳಿವೆ. ಆದರೆ ಕನ್ನಡದಲ್ಲಿ ಇಂಥ ಪುಸ್ತಕ ಈ ವರೆಗೆ ಇದ್ದಿರಲಿಲ್ಲೆಂದು ಹೇಳಬಹುದು. ಶ್ರೀ ಜೋಶಿಯವರು ಈ ಕೊರತೆಯನ್ನು ಹೋಗಲಾಡಿಸಿರುವರು. ಸಾರ್ವಜನಿಕ ಸಭೆ ನಡೆಸುವವರು ಸ್ಥಾನಿಕ ಸಂಸ್ಥೆಗಳವರು ಮತ್ತು ಇತರ ಸಂಘ ಸಂಸ್ಥೆಗಳವರು ತಮ್ಮ ಕಾರ್ಯಕಲಾಪಗಳನ್ನು ನಡೆಸುವಲ್ಲಿ ಈ ಪುಸ್ತಕದ ಉಪಯೋಗ ಬಹಳ ಮಟ್ಟಿಗೆ ಆಗುವದೆಂದು ಬೇರೆ ಹೇಳಬೇಕಿಲ್ಲ. ಸಭಾಪತಿಗಳಲ್ಲದೆ ಸಭಾಸದರೂ ಪ್ರೇಕ್ಷಕರೂ ಸಭೆಗಳನ್ನು ಶಾಂತ ರೀತಿಯಿಂದ ನಡೆಸಿಕೊಂಡು ಹೋಗಬೇಕಾದುದು ಅವಶ್ಯವಾಗಿದ್ದು ಅವರಾದರೂ ಈ ಪುಸ್ತಕದ ಲಾಭ ಪಡೆಯಬೇಕೆಂದು ಸೂಚಿಸುತ್ತೇವೆ. ಪರಿಶಿಷ್ಟಗಳಲ್ಲಿ ಗ್ರಾಮಪಂಚಾಯತ ಸಭೆಯ ನಿಯಮಗಳು, ಮುನಸಿಪಾಲಟಿ ಲೋಕಲ್ ಬೋರ್ಡು ಸಭೆಗಳ ನಿಯಮಗಳು, ಸಹಕಾರ ಸಭೆ ಘಟನೆ ಮತ್ತು ನಿಯಮಗಳನ್ನು ಸಭಾ ವಿಷಯಕ ಶಬ್ದಗಳನ್ನು ಕೊಡಲಾಗಿದೆ. ಈ ಪುಸ್ತಕವು ಎಲ್ಲ ದೃಷ್ಟಿಯಿಂದ ಉಪಯುಕ್ತವಾಗಿದ್ದು ಇದನ್ನು ಪ್ರಸಿದ್ಧಿಸಿದ್ದಕ್ಕಾಗಿ ಗ್ರಂಥಕರ್ತರು ಅಭಿನಂದನೆಗೆ ಪಾತ್ರರಾಗಿರುವರು. ನ್ಯಾಯಮೂರ್ತಿ ನಾರಾಯಣರಾವ ಲೋಕೂರರು ಇದಕ್ಕೆ ಮುನ್ನುಡಿ ಬರೆದು ಪುಸ್ತಕದ ಉಪಯುಕ್ತತೆಯನ್ನು ವಿವರಿಸಿರುವರು.

### Among an]S edanmen

in Great Britain by Dinkar Desai Servants of India Society Sandhurst Road Girgaum Bombay.

೩೪ ಪುಟಗಳ ಪುಟ್ಟ ಪುಸ್ತಿಕೆ ಭಾರತ ಸೇವಕ ಸಮಾಜದ ಶ್ರೀ ದಿವಕರ ದೇಸಾಯಿಯವರು ಹಿಂದೀ ನಾವಿಕರ ಪ್ರತಿನಿಧಿಗಳೆಂದು ಅಂತರ್‌ರಾಷ್ಟ್ರೀಯ ನಾವಿಕರ ಕೂಲಿಕಾರ ಪರಿಷತ್ತಿಗಾಗಿ ಕೋಪನಹೆಗನಕ್ಕೆ ಹೋಗಿದ್ದರಷ್ಟೆ. ಆ ಕಾರ್ಯ ಮುಗಿಸಿಕೊಂಡು ಇಂಗ್ಲಂಡಿಗೆ ಹೋದಾಗ ಅಲ್ಲಿ ೪೦ ದಿನಗಳ ವರೆಗೆ ಇದ್ದು ಅಲ್ಲಿನ ನಾವಿಕರ ಪರಿಸ್ಥಿತಿಗಳನ್ನೆಲ್ಲ ಚೆನ್ನಾಗಿ ಅಭ್ಯಸಿಸಿದರು. ಅದರ ಫಲವೆ ಸದ್ಯದ ಪುಸ್ತಕ. ಹಿಂದುಸ್ತಾನವು ನೌಕಾ ಪ್ರಪಂಚದಲ್ಲಿ ಮಹತ್ವದ ಸ್ಥಾನವನ್ನು ಪಡೆದಿದು ಇಲ್ಲಿ ನಾವಿಕರ ಸಂಖ್ಯೆಯೂ ಹೆಚ್ಚಾಗಿದೆ. ಆದುದರಿಂದ ಅವರ ಸ್ಥಾನಮಾನಗಳನ್ನು ಸುಧಾರಿಸುವುದವಶ್ಯವಾಗಿದೆಂದು ಬೇರೆ ಹೇಳಬೇಕಾಗಿಲ್ಲ. ಈ ಸಂದರ್ಭದಲ್ಲಿ ಇಂಗ್ಲಂಡದಂಥ ಮುಂದುವರಿದ ರಾಷ್ಟ್ರದಲ್ಲಿ ಎಂತು ಪ್ರಗತಿ ಹೊಂದಿರುರೆಂಬದನ್ನು ತಿಳಿದುಕೊಳ್ಳುವದಶ್ಯ. ಬ್ರಿಟಿಶ ಬಂದರಗಳ್ಳಿರುವ ಹಿಂದೀ ನಾವಿಕರ ಸ್ಥಿತಿಗತಿಗಳು ಸಮಾಧಾನಕರವಿರುವದದಿಲ್ಲ. ಇತ್ತ ಹಿಂದೀ ಹಾಯ ಕಮೀಶನರರು ಸಾಕಷ್ಟು ಲಕ್ಷಪೂರೈಸಿಲ್ಲೆಂದು ಶ್ರೀ ದಿನಕರರು ಕೊನೆಯಲ್ಲಿ ಅಭಿಪ್ರಾಯ ಪಟ್ಟಿರುವರು. ಇದೀಗ ಹಿಂದುಸ್ತಾನಲ್ಲಿ ರಾಷ್ಟ್ರೀಯ ಸರಕಾರ ಸ್ಥಾಪಿತವಾಗಿದ್ದು ಅವರು ಬೇರೆ ಬೇರೆ ದೇಶಗಳಲ್ಲಿಯ ಪರಿಸ್ಥಿತಿಯನ್ನು ತಿಳಿದುಕೊಂಡು ಹಿಂದೀ ನಾವಿಕರ ಸ್ಥಿತಿಯನ್ನು ಸುಧಾರಿಸುತ್ತ ಲಕ್ಷ ಪೂರೈಸುವರೆಂದು ನಂಬಲಾಗಿದೆ.

### Architecture

by Claude Batley - Oxford Pamphlets an Indian affairs - Oxford University Press Bombay

ಬೆಲೆ ಆರಾಣೆ—ಆಕ್ಸಫರ್ಡ ವಿಶ್ವವಿದ್ಯಾಲಯ ಮುದ್ರಣಾಲಯದವರು ಹಿಂದುಸ್ತಾನದ ಸಂಬಂಧದಲ್ಲಿ ಹೊರಡಿಸುತಿರುವ ಸಣ್ಣ ಸಣ್ಣ ಪ್ರಕಟನೆಗಳಲ್ಲಿ ಇದೊಂದು. ಹಿಂದುಸ್ತಾನ ಶಿಲ್ಪಕಲೆಯಲ್ಲಿ ಪ್ರಾಚೀನಕಾಲದಿಂದಲೂ ಹೆಸರು ಪಡೆದಿದೆ. ಇಲ್ಲಿರುವ ಗುಡಿಗೋಪುರ ಮತ್ತು ಇತರ ಕಟ್ಟಡಗಳು ಇದಕ್ಕೆ ಸಾಕ್ಷಿ. ಪುಸ್ತಕ ಲೇಖಕರು ಈ ಪುಸ್ತಿಕೆಯಲ್ಲಿ ಲೇಖಕರು ಹಿಂದುಸ್ತಾನದ ಶಿಲ್ಪದ ವಿವಿಧ ಮಾದರಿಗಳ ಪ್ರಗತಿಯೆಂತಾಯಿತೆಂಬುದನ್ನು ವಿವರಿಸಿ ಹಿಂದಿನ ಕಟ್ಟಡಗಳು ಮಳೆ ಗಾಳಿಗಳಿಗೀಡಾಗಿ ದುರಸ್ತಿಯಿಲ್ಲದೆ ನಿಂತಿದ್ದರೂ ಅವೆಷ್ಟು ಮೋಹಕವಾಗಿವೆಂಬದನ್ನು ಬರೆದಿರುವರು. ಆಧುನಿಕ ಶಿಲ್ಪಿಗಳು ಹಿಂದಿನ ಶಿಲ್ಪಿಗಳನ್ನು ಬಹಳ ಮಟ್ಟಿಗೆ ಅನುಸರಿಸುವದರ ಅವಶ್ಯಕತೆಯನ್ನೂ ಲೇಖಕರು ಪ್ರತಿಪಾದಿಸಿರುವರು. ನಮ್ಮ ಹಳ್ಳಿಗಳ್ಳಿಯ ಮನೆಗಳೆಂತಿರುವವೆಂಬುದನ್ನೂ ಸೂಚಿಸಿರುವರು. ಈ ಸಂಬಂಧದಲ್ಲಿ ಶಿಕ್ಷಣ ವ್ಯವಸ್ಥೆಯನ್ನು ಮಾಡುವದೂ ಅವಶ್ಯವೆಂದು ಅವರ ಅಭಿಪ್ರಾಯ. ಸಂಬಂಧಿಸಿದವರು ಇತ್ತ ಗಮನಿಸಬೇಕಾಗಿ ಸೂಚಿಸಬಯಸುತ್ತೇವೆ.

---

ಕದ್ದು ಕೇಳಿದ್ದು

## ಬೆಂಕಿಪೆಟಗಿ ಬರಗಾಲ

ಲೇ:— ವೆಂಕಣ್ಣಾಚಾರ್ಯ ಪಪ್ಪು ಬಿ. ಎ. ಎಲ್. ಎಲ್. ಬಿ. ವಕೀಲ ಹುಬ್ಬಳ್ಳಿ

ಕತ್ಲೆಪ್ಪಾ:— ಕಡ್ಡಿಪೆಟ್ಟಿಗಿ ಇಟ್ಟಾವ ಭಳ ಪುಣ್ಯವಂತ.

ಕಾಳಪ್ಪಾ:— ಛೀ, ಅಗ್ನಿ ಹುಡುಕಿ ತಗದ ಪ್ರಾಚೀನ ಋಷಿ ಅಪ್ಪ ಕಿನ್ಮತ್ತು ಅವಗ.

ಕ:— ಕಾಲ ಚಕ್ರ ತಿರಗತದ, ಪುನಃ ಪುನಃ ಪುನರಾವೃತ್ತಿ.

ಕಾ:—ಬರಾಬರಿ, ಮೊದ್ಲ ಮನುಷ್ಯಗ ಬೆಂಕಿ ಅಂದರೇನು ಗೊತ್ತಿದ್ದಿಲ್ಲಾ. ಮುಂದ ಹಿಂದಾಗಡೆ ಅರಣ್ಯದಾಗ ಬಿರುಗಾಳಿ ಬಿಟ್ಟಾಗ ಒಂದು ಕ್ಕೊಂದು ಟೊಂಗಿ ಘರ್ಷಣದಿಂದ ಬೆಂಕಿ ಉತ್ಪನ್ನ ಅಗೋದು ನೋಡಿ ತಾನೂ ಅದರಂತ ಎರಡು ಕಟಗಿ ತುಂಡ ತಿಕ್ಕಿ ಬೆಂಕಿ ತಾಗದು ಅಗ್ನಿದೇವರ್ನಕ ಪ್ರತ್ಯಕ್ಷ ಮಾಡಿಕೊಂಡು ಮಹಾತ್ಮಾ ಯಾಕ ದೊಡ್ಡ ಋಷಿ ಅನಿಸಿಕೊಂಡ! ಮುಂದ ಹಿಂದಾಗಡೆ......

ಕ:— ಏನ ಮುಂದ ಹಿಂದಾಗಡೆ?

ಕಾ:— ಚೇಷ್ಟಾ ಬ್ಯಾಡ, ನಾನು ಅಗ್ನಿಯ "ಹಿಂದು ಇಂದು ಮುಂದು" ಹೇಳಲಿಕ್ಕೆ ಹತ್ತೇನಿ.

ಕ:— ಗೊತ್ತದ ಮುಂದ ಹಿಂದಾಗಡೆ ಏನಾತು ಹೇಳು.

ಕಾ:— ಅಗ್ನಿ ಹೊತ್ತಿ ಅಗಿ ಸದಾ ಅಗ್ನಿ ಇಟಗೊಂಡು ಜನರಿಗೂ ಅದರ ಉಪಯೋಗ ಮಾಡಿಸಿ ಒಂದು ತರಹದ ಸಮಾಜ ಸೇವಾ ಮಾಡಿದಾ.

ಕ:— ಮುಂದ ಹಿಂದಾಗಡೆ?

ಕಾ:— ಮುಂದ ಹಿಂದಾಗಡೆ? ಕಲ್ಲಿನ ಘರ್ಷಣದಿಂದ ಬೆಂಕಿ ತಗಿಲಿಕ್ಕೆ ಹತ್ತಿತು. ಆ ನಂತರ ಕಡ್ಡಿಪೆಟ್ಟಿಗೆ ಯುಗಾ ಸುರುವಾತು.

ಕ:— "ಎಲೆ ಒಂಪ ಕಡ್ಡ್ಯಾಗ ಅದಿ" ಅಂತ ಬೆದರಿಕೆ ಹಾಕಲಿಕ್ಕೆ ನೆಟ್ಟಗಾತು.

ಕಾ:— ಅ ಮ್ಯಾಲೆ ಮನುಷ್ಯನ ಶಾಸ್ತ್ರೀಯ ಮತ್ತು ಸಂಶೋಧನ ಜ್ಞಾನಾ ಇಷ್ಟು ಜೋರ್ಲೆ ಬೆಳಿಲಿಕ್ಕೆ ಹತ್ತಿತು... ವಿದ್ಯುದ್ದೀಪಾ, ಪಾಕೆಟ್ ಸಿಗರೇಟಲಾಯಿಟರ, ಅಷ್ಟಯಾಕ ಮನುಷ್ಯನಲ್ಲೆ ಹರದಾಡುವ ವಿದ್ಯುತ್ ಶಕ್ತಿ ಕೇಂದ್ರೀಕರಿಸಿ ಒಂದು ಹತ್ತು ಕ್ಯಾಂಡಲ್ ಬಲ್ಬ ಅವನ ಹಣೆಮ್ಯಾಲಿಟ್ಟರ ದೀಪ ಹಚ್ಚೊ ಮಟ್ಟಕ್ಕ ನಮ್ಮ ವಿಜ್ಞಾನ ಹೋತು.

ಕ:— ಹಂಗಾರೇನು ಮನುಷ್ಯ ನಿಸರ್ಗನ್ನ ಗೆದ್ದಾಂಗ ಅತಲ್ಲ.

ಕಾ:— ಓಹೊ, ಆತು ಮಹಾಯುದ್ಧಾ ತೋರಿಸೇದಲ್ಲಾ!

ಕ:— ಏನು?

ಕಾ:— ಗೆದಿಯೋದು ಅಂದರ ಗುಲಾಮರಾಗೋದು. ಒಂಪ ಕಡ್ಡಿ ಪೆಟಗಿ ಇಲ್ಲದಿದ್ದರ ನಮ್ಮ ಬಾಳೆ ಗೋಳು. ಕಡ್ಡಿ ಕೆರದ ಸಪ್ಪಳಾ ಕೇಳಿದ ಒಂದು ಮೈಲ ಪರೀಘದಲ್ಲಿಯ ಚಟಪಟ ಒದಾಡುವ ಹೋಗಿ ಕುಡಿಯುವ ಚಟವಂತರು ಬಂದು ಮುಕುರಿಬಿಡತಾರ. ಆ ಉರಿಯೊ ಕಡ್ಡಿ ಕೊಳ್ಳಿ ದೆವ್ವನಂತೆ ನೂರಾರು ಕೈಯಾಗ ಓಡಾಡಿ ನೂರಾರು ಚುಟ್ಟಾ ಹೊತ್ತಿಸಿ ಧೂಮ್ರಪಾನಿಗಳ ಸಮಾಜದ ಸೇವಾ ಸಲ್ಲಿಸಿ ಸವೆದು ತೀರಿಕೊಳ್ಳತದ.

ಕ:— ಅಹಾ! ಆ ಕಡ್ಡಿಯದು ಎಂತಹ ಸಹನೆ! ಎಂತಹ ಸಮಾಜ ಸೇವೆ! ಎಂತಹ ತ್ಯಾಗ ಬುದ್ಧಿ! ಆ ಕಡ್ಡಿಯನ್ನು ನೀಡಿದವನಂತೂ ಮಹಾದಾನಶೂರ.

ಕಾ:— ರೇಲ್ವೆ ಡಬ್ಬ್ಯಾಗೂ ಹಿಂಗ ಆತು. ಇಂಜನಂತೂ ದೀಪಿಲ್ಲದ ಕತ್ತಲಾಗ ಹಂಗ ಓಡತಿರತದ. ಒಂದೇ ಕಡ್ಡಿಲೆ ಅಲ್ಲಿ ಕೂತ ಜನರೆಲ್ಲ ತಮ್ಮ ಚುಟ್ಟಾ ಹತ್ತಿಸಿ ಹೊನ್ನಿ ಹುಳದ್ಹಾಂಗ ಮಿನಗುವ ಚುಟ್ಟಾನಿ ಅಲ್ಲೆ ಜರಗೊ ಅನರ್ಥ ತೋರಸೊ ನಕ್ಷತ್ರದ ಬೆಳಕ ಮಾಡಿದರು.

ಕ:— ನನಗೂ ಒಂದು ಅನುಭವ ಹೀಗೆ ಬಂತು.

ಕಾ:— ಹೇಳು. ನನಗಂತೂ ಯುದ್ಧಜನ್ಯ ಭೀಷಣ ಪರಿಸ್ಥಿತಿ ಪಡಿನೆಳಲಿನ್ಯಾಗ ಬೆಳಿಯೊ ಘಟನೆಗಳನ್ನು ನೋಡಿ ನೋಡಿ ಕೇಳಿ ಕೇಳಿ ಕಣ್ಣು ಕಿವಿಗೆ ಅಜೀರ್ಣ ಆಗಿ ಹೋಗೇದ.

ಕ:— ಭಾರಿ ಬಂದದ್ದು ಸಾಲು ನಿಂತಿತ್ತು. ಅಲ್ಲೆ ಏನ ಕೊಡತಾರನ್ನೋದು ಯಾರಿಗೂ ಗೊತ್ತಿಲ್ಲ. ನಾನೂ ನಿಂತೆ. ಸರದೂ ಸರದೂ ನನ್ನ ಸರ್ತಿ ಬಂತು. ನೋಡತೇನಿ ಮಿಣಿ ಮಿಣಿ ಉರಿಯೊ ಮುನಸಿಪಾಲಿಟಿ ಕಂದೀಲು....

ಕಾ:— ಎಣ್ಣಿ ಅಭಾವಾ! ಎಣ್ಣಿ ಅವಾ ಆ ಕಂದೀಲಿಗೆ ಎಣ್ಣಿ ಬಹಳ ಹಾಕುದುಲ್ಲಾ ನಡವ ತಾಯಿಷ್ಟು ಎಣ್ಣಿ ಅಂದಿರತಾನ. ದೀಪದ್ದೇನ ತಪ್ಪು ಎಣ್ಣಿ ಇದ್ದಷ್ಟು ಉರೀತದ.

ಕ:— ಮುಂದಕೇಳು! ಎಲ್ಲಾರು ಆ ಕಂದೀಲಿಗೆ ಚುಟ್ಟಾ ಹೊತ್ತಿಸಿಕೊಂಡು ಹೊಂಡೋದು ನಾವೇನು ಚುಟ್ಟಾದವಾಲ್ಲಾ ಏನಲ್ಲಾ. ಚಹಾದ ಅಂಗಡ್ಯಾಗ ನೀ ಬರಿ ನೀರು ಕುಡುದು ಹೋಗ ಇಸಮಿಗೆ ಒದರತಾರಲ್ಲಾ "ಏಕ ಇಸ್ಸಮ್ಮ ಖಾಲಿ" ಹಾಂಗ ನಾ ಖಾಲಿ ಹೊರಟೆ.

ಕಾ:— ಅದರೂ ನೀ ಏನಂತೀದಿ, ನಮ್ಮ ಮಂದಿ ಬಹಳ ಧರ್ಮಿಷ್ಠರು. ದೇವರಿಗೆ ಅಂಜಿ ನೆಡಿಯೊ ಅವರು ಇದ್ದಕ್ಕ್ಯಾನ ಹೋಗಿ ಗುಡಿಯೊಳಗಿನ ದೇವರ ದೀಪಕ್ಕ ಚುಟ್ಟಾ ಹಚ್ಚಲಿಕ್ಕೆ ಹತ್ತಿದರ ಮಾಡೋದೇನು?

—೬ನೇ ಪುಟ ನೋಡಿರಿ





---

ಸಂಪಾದಕೀಯ * * * * * * * *

## ಟೀಕೆ-ಟಿಪ್ಪಣೆಗಳು

### ಗಾಂಧೀ ಜಯಂತಿ

ಇದೇ ಅಕ್ಟೋಬರ ೨ ನೆಯ ತಾರೀಖಿಗೆ ಮಹಾತ್ಮಾ ಗಾಂಧಿಯವರ ೭೮ನೆಯ ಜನ್ಮ ದಿನ. ಭಾರತೀಯರು ಅವರ ಈ ಜಯಂತಿಯನ್ನು ೮೪ ದಿನ ವಿಜೃಂಭಣೆಯಿಂದ ಜರಗಿಸುತಿರುವರು. ವಿಧಾಯಕ ಕಾರ್ಯದ ಸಪ್ತಾಹವೆಂದು ಇದನ್ನು ಆಚರಿಸುತ್ತ ಬಂದಿರುವರು. ಅಂತೆಯೆ ಗಾಂಧೀಜಿಯವರು ಕೂಡ ಇದಕ್ಕೆ ಗಾಂಧೀ ಜಯಂತಿಯೆನ್ನದೆ ಚರಖಾ ಜಯಂತಿಯೆಂದು ನಾಮಕರಣ ಮಾಡಿದ್ದು ವಿಧಾಯಕ ಕಾರ್ಯ ಮಾಡಲು ಕೇಳಿಕೊಂಡಿರುವರು. ಅಖಂಡ ಸೂತ್ರ ಯಜ್ಞ ಹಿಂದು ಮುಸಲ್ಮಾನರ ಐಕ್ಯ, ಅಸ್ಪೃಶ್ಯತಾ ನಿವಾರಣೆ ಮೊದಲಾದ ಆತ್ಯವಶ್ಯಕ ಕೆಲಸಗಳಿಗಾಗಿ ಭಾರತೀಯರು ಈ ವಾರ ತೊಡಗಬೇಕೆಂದು ಗಾಂಧೀಜಿಯವರ ಹೇಳಿಕೆ. ಇದು ಅವಶ್ಯವೆಂದು ಬೇರೆ ಹೇಳಬೇಕಿಲ್ಲ. ಕಾಂಗ್ರೆಸ್ಸಿನ ಅಧ್ಯಕ್ಷರೂ ಹಿಂದುಸ್ತಾನ ಸರಕಾರದ ಉಪಾಧ್ಯಕ್ಷರೂ ಅಗಿರುವ ಪಂಡಿತ ಜವಾಹರಲಾಲ ನೆಹರುರವರು ಗಾಂಧೀ ಜಯಂತಿ ಬಗ್ಗೆ ಕಾಂಗ್ರೆಸ್ಸಿಗರಿಗೆಲ್ಲ ಸೂಚನೆಗಳನ್ನು ಕಳಿಸಿರುವರು. ಹಿಂದುಸ್ತಾನದ ಸ್ವಾತಂತ್ರ್ಯ ಮತ್ತು ಮಾನವ ಉದ್ಧಾರದ ಅಧಿದೇವತೆಯಾಗಿರುವ ಮಹಾತ್ಮರ ಈ ಜಯಂತಿಯನ್ನು ಉಚಿತ ರೀತಿಯಿಂದ ಮಾಡಬೇಕೆಂದೂ ಸದ್ಯದ ಪರಿಸ್ಥಿತಿಯಲ್ಲಿ ಅವರ ಮಹತ್ವದ ಸಂದೇಶ ಮರೆಯಬಾರದೆಂದೂ ಜವಾಹರಲಾಲರು ಹೇಳಿರುವರು. ಬರಿ ಘೋಷಣೆಗಳಿಂದ ಇಲ್ಲವೆ ಪ್ರದರ್ಶನಗಳಿಂದ ಈ ಕಾರ್ಯವಾಗದು. ಆದರೆ ಮಹಾತ್ಮರು ಹೇಳುತ್ತ ಬಂದಂತೆ ವಿಧಾಯಕ ಕಾರ್ಯದಿಂದಲೆ ಇದು ಸಾಧ್ಯ. ಅವರ ಧುರೀಣತ್ವದಲ್ಲಿಯೆ ಹಿಂದುಸ್ತಾನ ಸ್ವಾತಂತ್ರ್ಯವನ್ನು ಸಮೀಪಿಸಿದರೂ ಇನ್ನೂ ಅನೇಕ ಎಡರು ತೊಡರುಗಳುಳಿದಿರುವವು. ಆದರೆ ಅವರ ಧುರೀಣತ್ವದಲ್ಲಿಯೆ ನಾವು ಮುಂದಿನ ಮಾರ್ಗ ಸ್ವೀಕರಿಸುವದಾಗಿಯೂ ಜವಾಹರರು ಅಭಿಪ್ರಾಯ ಪಟ್ಟಿದ್ದಾರೆ. ಜವಾಹರಲಾಲರು ಸೂಚಿಸಿದಂತೆ ಭಾರತೀಯರು ಈ ಜಯಂತಿಯನ್ನಾಚರಿಸಬೇಕೆಂದು ಬಿನ್ನವಿಸುತ್ತೇವೆ.

### ನೀರಿನ ಪೂರಯಿಕೆ

ಮುಂಬಯಿ ಪ್ರಾಂತದ ಅನೇಕ ಹಳ್ಳಿಗಳಲ್ಲಿ ನೀರಿನ ಪೂರಯಿಕೆ ಸಾಕಷ್ಟು ಇಲ್ಲದ್ದರಿಂದ ಜನರಿಗೆ ಬಹಳ ತೊಂದರೆಯಾಗುತಿದೆ. ವಿಶೇಷತಃ ಬೇಸಿಗೆಯಲ್ಲಿ ಎಲ್ಲ ಕೆಲಸ ಬಿಟ್ಟು ಮನೆಯವರೆಲ್ಲ ನೀರಿಗಾಗಿಯ ಕನಿಷ್ಠ ಅರ್ಧ ದಿನವನ್ನು ಕಳೆಯಬೇಕಾಗುವದು. ಲೋಕಪ್ರಿಯ ಸರಕಾರದವರೀಗ ನೀರಿನ ಪೂರಯಿಕೆಯ ಸಂಬಂಧದಲ್ಲಿ ೪ ಕೋಟಿ ರೂಪಾಯಿಗಳ ಯೋಜನೆಯೊಂದನ್ನು ಮಾಡಿರುವರು. ೨೦೦ ಮತ್ತು ಅದಕ್ಕಿಂತ ಹೆಚ್ಚು ಜನವಸತಿಯುಳ್ಳ ಹಳ್ಳಿಗಳಿಗೆಲ್ಲ ನೀರು ಸಿಕ್ಕುವಂತೆ ಏರ್ಪಡಿಸಲಾಗುವದು. ಮುಂಬಯಿ ಪ್ರಾಂತದಲ್ಲಿ ಇಂಥ ೧೭ ಸಾವಿರ ಹಳ್ಳಿಗಳಿದ್ದು ಎಲ್ಲ ಹಳ್ಳಿಗಳಿಗೂ ನೀರಿನ ಪೂರಯಿಕೆಯಾಗುವಂತೆ ಯೋಜನೆ ಮುಗಿಯಬೇಕಾದರೆ ಆರೇಳು ವರ್ಷ ಹಿಡಿಯಬಹುವೆಂದು ಮುಂಬಯಿ ಸರಕಾರದ ಯುದ್ಧೋತ್ತರ ಪುನರ್‍ರಚನೆಯ ಮುಖ್ಯ ಎಂಜಿನಿಯರರಾದ ಶ್ರೀ ಕಾಳೆಯವರು ಅಭಿಪ್ರಾಯ ಪಟ್ಟಿರುವರು. ಸರಕಾರದವರು ಈಗಾಗಲೆ ಈ ಯೋಜನೆಯನ್ನು ಐದು ಜಿಲ್ಹೆಗಳಲ್ಲಿ ಪ್ರಾರಂಭಿಸಿದ್ದು ಇನ್ನುಳಿದ ಜಿಲ್ಹೆಗಳಲ್ಲಿಯೂ ಬೇಗನೆ ಅದನ್ನು ಪ್ರಾರಂಭಿಸಲಿರುವರು. ಯಾವ ಹಳ್ಳಿಗಳಲ್ಲಿ ನೀರಿನ ಅವಶ್ಯಕತೆ ಹೆಚ್ಚಿಗಿದೆಂದು ಮುರೆತಾದ್ದರಬಗ್ಗೆ ಅಂಕಿಸಂಖ್ಯೆಗಳನ್ನು ಕಲೆಹಾಕಿ ಸರಕಾರಕ್ಕೆ ಕಳಿಸಬೇಕೆಂದೂ ಆಯಾ ಹಳ್ಳಿಗಳ ಅವಶ್ಯಕತೆಗಳನ್ನನುಲಕ್ಷಿಸಿ ಯೋಜನೆಗಳನ್ನು ಕೈಕೊಳ್ಳಲಾಗುವದೆಂದೂ ಜಿಲ್ಹಾ ಲೋಕಲ್ ಬೋರ್ಡುಗಳಿಗೆ ತಿಳಿಸಲಾಗಿದೆ. ಸರಕಾರದವರು ಈ ಯೋಜನೆಯನ್ನು ಮೊದಲು ಕೈಕೊಂಡಿದ್ದು ಸ್ತುತ್ಯವಾಗಿದೆ. ಇಂಥ ಸ್ತುತ್ಯ ಉಪಕ್ರಮಗಳಲ್ಲಿ ಸರಕಾರಧವರು ಯಾವ ಅಸ್ಥೆಯನ್ನು ವಹಿಸಿರುವರೋ ಅದೇ ಅಸ್ಥೆಯಿಂದ ಹುರುಪಿನಿಂದ ಆಯಾ ಅಧಿಕಾರಿಗಳು ಕಾರ್ಯ ಮಾಡಬೇಕೆಂದು ಬೇರೆ ಹೇಳಬೇಕಿಲ್ಲ. ಆಯಾ ಹಳ್ಳಿಗರಾದರೂ ಸರಕಾರದ ಈ ಕೆಲಸದಲ್ಲಿ ಅವಶ್ಯಕ ಸಹಾಯ ಸಲ್ಲಿಸಬೇಕು. ಅಂದರೆ ಆದಷ್ಟು ಬೇಗ ಎಲ್ಲ ಹಳ್ಳಿಗಳಲ್ಲಿ ನೀರಿನ ವ್ಯವಸ್ಥೆಯಾಗಲನುಕೂಲವಾಗುವದು. ಹಳ್ಳೀ ನೀರಿನ ಪೂರೈಕೆಯ ಜತೆಯಲ್ಲಿಯೆ ಸರಕಾರದವರು ಸಣ್ಣ ಸಣ್ಣ ನೀರಾವರಿ ಯೋಜನೆಗಳನ್ನೂ ಕೈಕೊಳ್ಳಲಿರುವರು. ಈ ಯೋಜನೆಗಳು ಅತ್ಯಂತ ಅವಶ್ಯವಾಗಿದೆಂದು ಬೇರೆ ಹೇಳಬೇಕಿಲ್ಲ.

### ಸಂಸ್ಥಾನ ಪ್ರಜರ ಬೇಡಿಕೆ

ಪಂಡಿತ ಜವಾಹರಲಾಲರ ಅಧ್ಯಕ್ಷತೆಯಲ್ಲಿ ಪ್ರಗತಿ ಪಡೆಯುತಿರುವ ಸಂಸ್ಥಾನ ಪ್ರಜಾ ಪರಿಷತ್ತಿನ ಸ್ಥಾಯಿ ಸಮಿತಿಯ ಸಭೆ ಸೇರಿ ಕೆಲ ಮಹತ್ವದ ಗೊತ್ತುವಳಿಗಳನ್ನು ಸ್ವೀಕರಿಸಿತು. ಇದೀಗ ಭಾರತದ ರಾಜ್ಯಘಟನೆ ಸಿದ್ಧವಾಗಲಿದ್ದು ಅದರಲ್ಲಿ ಸಂಸ್ಥಾನ ಪ್ರಜರೂ ತಕ್ಕ ಪಾತ್ರ ವಹಿಸಬೇಕಾದುದು ಅವಶ್ಯವಾಗಿದೆ. ಘಟನಾ ಸಮಿತಿಗೆ ಬ್ರಿಟಿಶ್ ಭಾರತದಿಂದ ಕೇವಲ ಲೋಕನಿಯುಕ್ತರೆ ಸದಸ್ಯರಾಗಿ ಆರಿಸಲ್ಪಟ್ಟದ್ದರೂ ಸಂಸ್ಥಾನ ಭಾಗದಿಂದ ಸಂಸ್ಥಾನಿಕರು ನಾಮಕರಣ ಪದ್ಧತಿಯನ್ನನುಸರಿಸಿರುವರು. ಬೇರೆ ಬೇರೆ ಸಂಸ್ಥಾನ ಪ್ರಜಾ ಪರಿಷತ್ತಿನವರು ಇದನ್ನು ಟೀಕಿಸಿರುವರು. ಸಂಧಾನ ಸಮಿತಿಯಲ್ಲಿ ಸಂಸ್ಥಾನ ಪ್ರಜೆಗಳಿಗೆ ಪ್ರಾತಿನಿಧ್ಯವಿರಬೇಕು. ಬ್ರಿಟಿಶ್ ಭಾರತದಲ್ಲಿ ಆದ ಮಾದರಿಯ ಸುಧಾರಣೆಗಳೂ ಸಂಸ್ಥಾನಗಳಲ್ಲಿ ಅಗಬೇಕಾದುದು ಅವಶ್ಯವಾದ್ದರಿಂದ ಸಂಸ್ಥಾನಗಳಲ್ಲಿಯೂ ಲೋಕನಿಯುಕ್ತ ನಡುಗಾಲ ಸರಕಾರ ಸ್ಥಾಪಿಸಬೇಕೆಂದೂ ಸ್ಥಾಯಿ ಸಮಿತಿಯವರು ಒತ್ತಾಯವಡಿಸಿರುವರು. ಸಂಸ್ಥಾನಗಳಲ್ಲಿ ಹೊಣೆಗಾರ ರಾಜ್ಯಪದ್ಧತಿ ಸ್ಥಾಪಿತವಾಗುವಂತೆ ಘಟನೆಯನ್ನು ಸಿದ್ಧಪುಡಿಸಲು ಈ ನಡುಗಾಲ ಸರಕಾರದವರು ಲೋಕ ಪ್ರಾತಿನಿಧಿಕ ಘಟನಾ ಸಮಿತಿಯನ್ನು ಸ್ಥಾಪಿಸಬೇಕೆಂದೂ ಬಿನ್ನವಿಸಿರುವರು. ೫೦ ಲಕ್ಷ ಜನಸಂಖ್ಯೆ ಮತ್ತು ೩ ಕೋಟಿ ಉತ್ಪನ್ನವಿದ್ದ ಸಂಸ್ಥಾನಗಳು ಮಾತ್ರ ಸಂಯುಕ್ತ ರಾಜ್ಯಾಂಗದ ಘಟಕಗಳಾಗಬಲ್ಲವೆಂದು ಸಮಿತಿಯವರ ಅಭಿಪ್ರಾಯ. ಉಳಿದವೆಲ್ಲ ಸಮೀಪದ ಬ್ರಿಟಿಶ್ ಇಲ್ಲವೆ ಸಂಸ್ಥಾನಗಳಲ್ಲಿ ಒಕ್ಕೂಟ ಹೊಂದುವ ವಿಚಾರವನ್ನೂ ಈ ಘಟನಾ ಸಮಿತಿ ಮಾಡಬಹುದು. ಇವೆಲ್ಲ ಗೊತ್ತುವಳಿಗಳು ಅತ್ಯಂತ ಮಹತ್ವದ್ದಾಗಿವೆ. ಸಂಸ್ಥಾನಿಕರು ನಾಡಿನ ನುಡಿಗಳನ್ನು ತಿಳಿದುಕೊಂಡು ಪ್ರಜೆಗಳಿಗೆ ಹೆಚ್ಚು ಹಕ್ಕು ಬಾಧ್ಯತೆ ಕೊಡುವತ್ತ ಗಮನಿಸಬೇಕು. ಸಂಸ್ಥಾನಗಳಲ್ಲಿ ಹೊಣೆಗಾರ ರಾಜ್ಯಪದ್ಧತಿಯನ್ನು ಸ್ಥಾಪಿಸಿದ್ದಾದರೆ ಪ್ರಜೆಗಳೂ ಸಂತುಷ್ಟರಾಗುವರು, ಸಂಸ್ಥಾನಿಕರೂ ಕರ್ತವ್ಯ ಮಾಡಿದಂತಾಗುವದು. ಸಂಸ್ಥಾನಿಕರು ಸಹಾನುಭೂತಿಪೂರ್ವಕ ಇದನ್ನೆಲ್ಲ ವಿಚಾರಿಸಬೇಕು.

### ಶಾಂತಿ ಸೇನೆಯ ಅವಶ್ಯಕತೆ

ಮುಂಬಯಿ ಕಲಕತ್ತೆ ಅಹಮದಾಬಾದ ಡಾಕಾ ಮೊದಲಾದ ನಗರಗಳಲ್ಲಿ ನಡೆದ ಹತ್ಯಾಕಾಂಡವನ್ನು ನೋಡಿದರೆ ಯಾರಿಗಾದರೂ ವಿಷಾದವಾಗದಿರದು. ಕಳೆದ ೩೫ ವರ್ಷಗಳಿಂದ ಹಿಂದುಸ್ತಾನದಲ್ಲಿ ಕಾಂಗ್ರೆಸ್ಸು ಶಾಂತಿ ಮಂತ್ರವನ್ನು ಜಪಿಸುತಿದ್ದರೂ ಕಿಡಿಗೇಡಿಗಳು ಇನ್ನೂ ತಮ್ಮ ಕಾರ್ಯನಡೆಸುತಿರುವರು. ಇಂಥ ದೊಂಬಿಗಳನ್ನು ತಡೆಯಬೇಕಾದರೆ ಅಲ್ಲಲ್ಲಿ ಶಾಂತಿ ಸೇನೆಗಳನ್ನು ಸಂಘಟಿಸುವದು ಅವಶ್ಯವಾಗಿದೆ. ಬರಿ ಪೋಲೀಸರಿಂದ ಈ ಬಗೆಯ ದೊಂಬಿಗಳನ್ನು ಅಡಗಿಸುವದು ಅಸಾಧ್ಯವಾದುದು. ಯಾವುದೊಂದು ಭಾಗದಲ್ಲಿ ದೊಂಬಿಯೆದ್ದರೆ ಪೋಲೀಸರು ಅದನ್ನು ಶಾಂತ ಮಾಡಬಹುದು. ಆದರೆ ನಗರದ ಪ್ರತಿಯೊಂದು ಭಾಗದಲ್ಲಿ ಪುಂಡರ ಹಾವಳಿ ನಡೆದರೆ ಪೋಲೀಸರು ಅದೆಂತು ಶಾಂತಿಯನ್ನು ರಕ್ಷಿಸಬೇಕು? ಅಂತೆಯೆ ಪ್ರತಿಯೊಂದು ಭಾಗದಲ್ಲಿ ಶಾಂತಿ ಸೇನೆಗಳನ್ನು ಸಂಘಟಿಸಿದ್ದಾದರೆ ಇಂಥ ದೊಂಬಿಗಳೆದ್ದಾಗ ಅವುಗಳ ಉಪಯೋಗವಾಗುವುದು. ಮುಂಬಯಿ ಪ್ರಾಂತಿಕ ಕಾಂಗ್ರೆಸ್ ಕಮೀಟಿಯ ಅಧ್ಯಕ್ಷ ಎಸ್. ಕೆ. ಪಾಟೀಲರು ಈ ಬಗ್ಗೆ ಒಂದು ಯೋಜನೆಯನ್ನು ಸಿದ್ಧಪಡಿಸಿರುವರು. ಮೇಲೆ ಹೇಳಿದಂತೆ ಕೇವಲ ಪೋಲೀಸರು ದೊಂಬಿಯನ್ನು ಹತ್ತಿಕ್ಕಲಾರರು. ಪ್ರತಿಸಲ ಮಿಲಿಟರಿಯವರನ್ನು ಕರೆಯಿಸುವುದು ಸರಿಯಲ್ಲ. ತತ್ವತಃ ಮತ್ತು ವ್ಯವಹಾರತಃ ಇದು ತಪ್ಪು ಎಂದು ಪಾಟೀಲರು ಹೇಳಿದ್ದು ಅತ್ಯಂತ ಉಚಿತವಾಗಿದೆ. ಇಂಥ ಶಾಂತಿಸೇನೆ ಸರಕಾರದ ನೇತೃತ್ವದಲ್ಲಿಯೇ ಸಂಘಟಿತವಾಗಿ ದೊಂಬಿಗಳು ಪ್ರಾರಂಭವಾದಲ್ಲಿ ಅವು ಕಾರ್ಯಪ್ರವೃತ್ತವಾಗಬೇಕೆಂದೂ ಪಾಟೀಲರ ಸೂಚನೆ. ಈ ಕೆಲಸಕ್ಕೆ ಅವರಿಗೆ ಪೋಲೀಸರಂತೆ ಲಾಠಿ, ಶಸ್ತ್ರಾಸ್ತ್ರಗಳನ್ನು ಧರಿಸುವ ಅಧಿಕಾರ ಕೊಡಬೇಕೆಂದು ಪಾಟೀಲರ ಅಭಿಪ್ರಾಯ. ಸರಕಾರದವರು ಈ ಬಗೆಯ ಸಂಘಟನೆಗಾಗಿ ಮತ್ತು ಸೇನೆಯ ಶಿಕ್ಷಣ ಮತ್ತು ಇತರ ಕೆಲಸಕ್ಕಾಗಿ ಹಣ ವೆಚ್ಚ ಮಾಡಬೇಕೆಂದು ಪಾಟೀಲರ ಅಭಿಪ್ರಾಯ. ಪಾಟೀಲರ ಈ ಯೋಜನೆಯನ್ನು ಆಯಾ ಪ್ರಾಂತಿಕಸರಕಾರಗಳು ಮತ್ತು ಸಾರ್ವಜನಿಕರು ಗಮನಿಸಬೇಕು. ಇದರಲ್ಲಿ ಜಾತೀಯ ಪ್ರಶ್ನೆ ಇಲ್ಲ. ಎಲ್ಲರೂ ಇದರಲ್ಲಿ ಸೇರಿ ದೇಶದಲ್ಲಿ ನೆಮ್ಮದಿ ವುಳಿವಂತೆ ನೋಡಿಕೊಳ್ಳಬೇಕು. ಇಂಥ ಶಾಂತಿದಳದ ಸಂಘಟನೆಗಾಗಿ ಸರಕಾರದವರು ಕೂಡಲೆ ಮುಂದಾಗಬೇಕು. ಎಲ್ಲ ಜಾತಿಯ ಜನರಲ್ಲಿ ವಿಶ್ವಾಸ ಹುಟ್ಟುವಂತೆ ಕಾರ್ಯ ಮಾಡುವ ಹಿಡಿತ ಈ ದಳದವರಿಗೆ ಸಿಕ್ಕುವಂತೆ ಏರ್ಪಡಿಸಬೇಕು. ಅಂದರೆ ಸದ್ಯದಂಥ ದಂಗೆಗಳ ಸದ್ದು ಬಹಳ ಮಟ್ಟಿಗೆ ಅಡಗುವದು.

### ಬ್ರಹ್ಮದೇಶದ ರಾಜಕಾರಣ

ಹಿಂದುಸ್ತಾನದಲ್ಲಿಯಂತೆ ಬ್ರಹ್ಮದೇಶದ ರಾಜಕಾರಣದಲ್ಲಿಯೂ ಕಿಡಿಗಳೇಳುತಿವೆ. ಬ್ರಹ್ಮದೇಶವು ಹಿಂದಿನ ಯುದ್ಧದಲ್ಲಿ ಬಹಳ ಮಟ್ಟಿಗೆ ಹಾನಿಗೊಂಡಿದ್ದರೂ ಸ್ವಾತಂತ್ರ್ಯಪ್ರೇಮ ಬ್ರಹ್ಮೀಯರಲ್ಲಿ ಹೆಚ್ಚುತಲಿದೆ. ಸರಕಾರದ ಕೈಗೊಂಬೆಯಾದವರು ಇನ್ನು ಮುಂದೆ ಅಧಿಕಾರದಲ್ಲುಳಿವುದು ಶಕ್ಯವಿಲ್ಲದಂತಾಗಿದೆ. ಅಂತೆಯೆ ಹಿಂದಿನ ಗವರ್ನರ ಡಾರ್ಮನ್ ಸ್ಮಿಥ್‌ರು ರಾಜೀನಾಮೆ ಕೊಟ್ಟು ಹೋಗಬೇಕಾಯಿತು. ಸದ್ಯದ ಗವರ್ನರ ಸರ್ ಹೂಬರ್ಟ ಲಾನ್ಸ ಇವರ ಕಾರ್ಯಕಾರೀ ಮಂಡಳವೂ ಈಗ ರಾಜೀನಾಮೆ ಕೊಡಬೇಕಾಯಿತು. ಫೇಸಿಸ್ಟ ವಿರೋಧಿ ಪಕ್ಷವೀಗ ಮಂತ್ರಿಮಂಡಳ ರಚಿಸುವುದಾಗಿ ತಿಳಿಯುತ್ತದೆ. ಹಿಂದುಸ್ತಾನದಲ್ಲಿ ನಡೆಯುತಿರುವ ಚಳವಳಿಗಳ ಪರಿಣಾಮ ಪೂರ್ವ ರಾಷ್ಟ್ರಗಳ ಮೇಲೆಯೂ ಆಗುತಿದೆಂಬುದಕ್ಕೆ ಬ್ರಹ್ಮದೇಶದ ರಾಜಕಾರಣ ಸಾಕ್ಷಿಯಾಗಿವೆ. ಬ್ರಹ್ಮದೇಶದ ಮಂತ್ರಿಮಂಡಳವೀಗ ರಾಜೀನಾಮೆಕೊಟ್ಟದ್ದರಿಂದ ಶಾಸನಸಭೆಯ ಅಧಿವೇಶನವನ್ನೂ ಮುಂದೆ ಹಾಕಲಾಗಿದೆ. ಮೆಯೊಚಿಟ್ ಪಕ್ಷದ ಧುರೀಣರೂ ಹಿಂದಿನ ಮುಖ್ಯಮಂತ್ರಿಗಳೂ ಆಗಿರುವ ಯು ಸಾ ರವರು ಈ ಸಂಬಂಧವಲ್ಲಿ ಒಂದು ಪ್ರಕಟನೆ ಹೊರಡಿಸಿ ಹಿಂದುಸ್ತಾನದಂತೆಯೆ ಬ್ರಹ್ಮದೇಶಕ್ಕೆ ಹಕ್ಕು ಬಾಧ್ಯತೆಗಳನ್ನು ಕೊಡಬೇಕು. ಇಲ್ಲಿಯೂ ನಡುಗಾಲ ಸರಕಾರವನ್ನು ಸ್ಥಾಪಿಸಬೇಕೆಂದು ಕೇಳಿದ್ದಾರೆ. ಈ ನಡುಗಾಲ ಸರಕಾರಕ್ಕೆ ಸಂಪೂರ್ಣ ಅಧಿಕಾರ ಮತ್ತು ಹಕ್ಕು ಕೊಟ್ಟರೆ ದೇಶದ ಪುನರ್‍ರಚನೆಯ ಹೊಣೆ ಹೊರಲು ಮೆಯೊಚಿಟ ಪಕ್ಷ ಸಿದ್ಧವಿದೆಂದು ಸಾರಿದ್ದಾರೆ. ಬ್ರಹ್ಮದೇಶದಲ್ಲಿ ಡೊಮೀನಿಯನ್ ಸರಕಾರ ಪದ್ಧತಿ ಸ್ಥಾಪಿಸಬೇಕೆಂದು ಮುಂತಾಗಿ ವಿಶಾಲ ತಳಹದಿಯ ಮೇಲೆ ಮಂತ್ರಿಮಂಡಳ ರಚಿಸಲಾಗುವುದೆಂದು ಪ್ರಕಟಿಸಲಾಗಿದೆ. ಅದೇನೇ ಇದ್ದರೂ ಬ್ರಹ್ಮದೇಶದಲ್ಲಿ ಹಿಂದಿನಂತೆ ಸ್ವಚ್ಛಂದ ವೃತ್ತಿಯ ಅಡಳಿತೆ ನಡೆದರೆ ಅಲ್ಲಿನ ಜನ ಅದನ್ನು ಸಹಿಸದೆಂಬುದು ನಿರ್ವಿವಾದವಾಗಿದೆ. ಇದನ್ನು ಲಕ್ಷದಲ್ಲಿಟ್ಟು ಬ್ರಿಟಿಶ್ ಸರಕಾರದವರು ತಮ್ಮ ಧೋರಣವನ್ನು ತಿದ್ದಿಕೊಳ್ಳಬೇಕೆಂದು ಆಗ್ರಹಪಡಿಸುತ್ತೇವೆ.

### ಸೂಕ್ತ ಸಲಹೆ

ಹಿಂದೂ ಮುಸಲ್ಮಾನರು ಬಹುಕಾಲದಿಂದ ಹಿಂದುಸ್ತಾನದಲ್ಲಿ ಕೂಡಿ ಇರುತಿದ್ದು ಇಲ್ಲಿನ ಸುಖ ಸಮೃದ್ಧಿಗಳಲ್ಲಿ ಪಾಲುಗಾರರಾಗಿರುವರು. ಕೆಲ ಕಾಲ ಪರಸ್ಪರರಲ್ಲಿ ತಿಕ್ಕಾಟ ನಡೆದಿದ್ದರೂ ಅವೆಲ್ಲ ಕ್ಷಣಿಕವಾಗಿದ್ದುವು. ಭಿನ್ನ ಜನಾಂಗವೆಂಬ ಭಾವನೆ ಇರಲಿಲ್ಲ. ಬ್ರಿಟಿಶರು ಮುಸಲ್ಮಾನರಿಗೆ ಪ್ರತ್ಯೇಕ ಮತದಾರ ಸಂಘವನ್ನು ಕೊಟ್ಟಂದಿನಿಂದ ಈ ಭೇದವು ಬಲಿಯುತ್ತ ಹೋಗಿ ಇಂದು ಬ್ಯಾ. ಜಿನ್ನಾ ಸಾಹೇಬರು ಮುಸಲ್ಮಾನರು ಪ್ರತ್ಯೇಕ ಜನಾಂಗವೆಂದು ಪ್ರತಿಪಾದಿಸಿ ಪಾಕಿಸ್ತಾನವನ್ನೆ ಬೇಡುತಿರುವರು. ಆದರೆ ಹಿಂದುಸ್ತಾನದಲ್ಲಿ ಭಿನ್ನ ಭಿನ್ನ ಮತಗಳ ಜನರು ವಾಸುತ್ತಿರುವುದರಿಂದ ಆಯಾ ಜಾತಿಗಳಿಗೊಂದರಂತೆ ರಾಷ್ಟ್ರವನ್ನು ವಿಭಜಿಸುವದು ಶಕ್ಯವಿಲ್ಲ. ಪಾಕಿಸ್ತಾನ ಪ್ರದೇಶವೆಂದು ಬ್ಯಾ. ಜಿನ್ನಾರವರು ಕರೆಯುತಿರುವ ಭಾಗದಲ್ಲಿಯೂ ಅನೇಕ ಹಿಂದುಗಳು ಮತ್ತು ಇತರ ಜನಾಂಗದವರು ಇರುವರು. ಅಲ್ಲಿ ಬಹಳಾದರೆ ಮುಸಲ್ಮಾನರು ಬಹುಸಂಖ್ಯಾಕರಾಗಿರಬಹುದು. ಹಿಂದುಸ್ತಾನದ ಇತರ ಭಾಗಗಳಲ್ಲಿ ಹಿಂದುಗಳು ಬಹುಸಂಖ್ಯಾಕರಾಗಿರುವರು. ಹೀಗಿದ್ದ ಮಾತ್ರಕ್ಕೆ ಹಿಂದುಸ್ತಾನವನ್ನು ಒಡೆಯುವದು ಯಾವ ರೀತಿಯಿಂದಲೂ ಇಷ್ಟವಾಗದು. ಹಿಂದೂ ಮುಸಲ್ಮಾನರು ಬಾಂಧವರಂತೆ ಕೂಡಿಕೊಂಡೇ ಇರಬೇಕಾದುದು ಉಚಿತವಾಗಿದೆ. ಬಂಗಾಲದ ಅರ್ಥಸಚಿವರಾದ ಮಹಮ್ಮದ ಅಲ್ಲಿಯವರು ತಮ್ಮ ಆಕಾಶವಾಣಿ ಭಾಷಣದಲ್ಲಿ "ಬೇರೆ ಬೇರೆ ಜಾತಿಯವರು ಪರಸ್ಪರ ಬಾಂಧವ್ಯ ಭಾವವಿಲ್ಲದೆ ಬಾಳಲಾರರು. ವ್ಯವಹಾರದಲ್ಲಿ ಉದ್ಯಮದಲ್ಲಿ ರಾಜಕಾರಣದಲ್ಲಿ ಕೂಡ ನಾವು ಕೂಡಿಯೆ ಸಾಗತಕ್ಕದ್ದು. ತಲೆ ತಲಾಂತರಗಳಿಂದ ನಾವು ಕೂಡಿ ಬಾಳಿದ್ದು ಜಗಳವಿಲ್ಲದೆ ಕೆಲಸ ಮಾಡುತ್ತ ಬಂದಿರುವೆವು. ಆದುದರಿಂದ ಮತ್ತೊಮ್ಮೆ ನಾವು ಎಲ್ಲ ಬಗೆಯ ದ್ವೇಷಭಾವನೆಯನ್ನು ಬೇಗನೆ ಬಿಟ್ಟುಗೊಟ್ಟು ಶಾಂತಿಯಿಂದ ಬಾಳುವೆ ಸಾಗಿಸುವಾ. ಶಾಂತಿಯುಳ್ಳರುವದೇ ನಮಗೆ ಬೇಕಾಗಿದೆ" ಎಂದು ಮುಂತಾಗಿ ಹೇಳಿರುವರು. ಕಲಕತ್ತೆಯ ಮೇಯರರಾದರೂ ಇದೇ ಬಗೆಯ ಅಭಿಪ್ರಾಯ ಪಟ್ಟಿರುವರು. ಲೀಗಿನ ಪ್ರಮುಖ ಅನುಯಾಯಿಗಳಾದ ಈ ಇಬ್ಬರು ಮಹನೀಯರ ನುಡಿಗಳು ಅರ್ಥಪೂರ್ಣವಾಗಿವೆ. ಜಿನ್ನಾಸಾಹೇಬರು ಇನ್ನಾದರೂ ಪಾಕಿಸ್ತಾನದ ತಮ್ಮ ಹುಚ್ಚನ್ನು ಬಿಟ್ಟುಗೊಟ್ಟು ಅಖಂಡ ಹಿಂದುಸ್ತಾನದ ಅಭಿವೃದ್ಧಿಗಾಗಿ ಪ್ರಯತ್ನಿಸುವರೆಂದು ಆಶಿಸಬಹುದೆ?

### ಅಂತರ್-—ಏಶಿಯಾ ಪರಿಷತ್ತು

ಏಶಿಯಾದ ಜನರಲ್ಲಿ ಬಾಂಧವ್ಯ ಬೆಳೆದು ಅವರು ಪರಕೀಯರ ದಬ್ಬಾಳಿಕೆಗೆ ಆಹುತಿಯಾಗದಂತೆ ನೋಡಿಕೊಳ್ಳುವುದವಶ್ಯವಾಗಿದೆ. ಏಶಿಯಾ ಸರ್ವಸಮೃದ್ಧ ಪ್ರಬಲ ಖಂಡವಾಗಿದ್ದರೂ ಇಲ್ಲಿನ ಜನರಲ್ಲಿ ಬಾಂಧವ್ಯ ಹೆಚ್ಚದಿಲ್ಲದ್ದರಿಂದ ಯುರೋಪಿಯನ್‌ರು ಅಮೇರಿಕನ್‌ರು ಇಲ್ಲಿ ತಮ್ಮ ಪ್ರಸ್ಥ ಬೆಳಿಸಿಕೊಂಡಿದ್ದಾರೆ. ಇದನ್ನು ಇಲ್ಲದಂತೆ ಮಾಡುವುದು ಅವಶ್ಯವಾಗಿದೆ. ಏಶಿಯಾ ರಾಷ್ಟ್ರಗಳಲ್ಲಿ ಬಾಂಧವ್ಯ ಬೆಳಿಸುವುದಕ್ಕಾಗಿಯೆ ನಡುಗಾಲ ಸರಕಾರದ ಉಪಾಧ್ಯಕ್ಷರಾದ ಪಂಡಿತ ಜವಾಹರಲಾಲ ನೆಹರುಗಳು ಬರುವ ಫೆಬ್ರುವರಿ ೧೫ ರಿಂದ ಮಾರ್ಚ ಕೊನೆಯವರೆಗೆ ದಿಲ್ಲಿಯಲ್ಲಿ ಪ್ರಥಮ ಅಂತರ್—ಏಶಿಯಾ ಪರಿಷತ್ತನ್ನು ಕರೆದಿರುವರು. ಇದಕ್ಕಾಗಿ ಜಪಾನ ಹಾಗು ಏಶಿಯಾದಲ್ಲಿಯ ಸೊವಿಯೆಟ ರಿಪಬ್ಲಿಕ್ ಒಳಗೊಂಡು ೩೦ ಏಶಿಯ ರಾಷ್ಟ್ರಗಳ ಸದಸ್ಯರಿಗೆ ಆಮಂತ್ರಣ ಕಳಿಸಿದ್ದಾರೆ. ಹಿಂದೀ ಜಾಗತಿಕ ಮಂಡಳದ ವತಿಯಿಂದ ಈ ಪರಿಷತ್ತು ನೆರೆಯಲಿದೆ. ಅದರ ಕಾರ್ಯಕಾರೀ ಮಂಡಲದ ಸಭೆ ಪಂಡಿತ ನೆಹರೂ ಇವರ ಅಧ್ಯಕ್ಷತೆಯಲ್ಲಿ ಸೇರಿ ಪ್ರತಿಯೊಂದು ರಾಷ್ಟ್ರಕ್ಕೆ ಸ್ತ್ರೀಯರನ್ನೊಳಗೊಂಡ ದೇಶಗಳಲ್ಲಿಯ ಸಂಘಗಳಿಂದ ೧೬ ಜನರನ್ನು

—೧೩ನೇ ಪುಟಕ್ಕೆ

# ಮೋಟಾರಿನ ಅವತಾರಗಳು



ಕಳೆದ ೫೦ ವರ್ಷಗಳಲ್ಲಿ ಮೋಟಾರಿನ ರೂಪ ಹೇಗೆ ಬದಲಿಸುತ್ತ ಹೋಯಿತೆಂಬಲ್ಲಿ ಬಲಗಡೆಯ ೨೦ ಚಿತ್ರಗಳು ಕಣ್ಣಿಗೆ ಕಟ್ಟುತ್ತವೆ. ಈಗ ಪ್ರಚಂಡವಾಗಿ ಬೆಳೆದಿರುವ ಮೋಟಾರ ಕಾರಿನ ಉದ್ಯಮ ಪ್ರಾರಂಭದಲ್ಲಿ ಅಮೇರಿಕೆಯಲ್ಲಿ ಹೇಗೆ ಕಾಣಿಸಿಕೊಂಡಿತೆಂಬದನ್ನು ನೋಡಿದರೆ ಅದರ ಈಗಿನ ವಿರಾಡ್ರೂಪ ಆಶ್ಚರ್ಯವನ್ನುಂಟುಮಾಡದೆ ಇರದು. ಕುದುರೆಯಿಲ್ಲದೆ ಗ್ಯಾಸೊಲಾಯಿನದಿಂದ ನಡೆಸಿಕೊಂಡು ಹೋಗುವ ಬಗಿಗಳನ್ನು ಸಾಹಸಿಗಳು ವೈಯಕ್ತಿಕವಾಗಿ ೧೮೯೦ ಕ್ಕೆ ಮೊದಲೇ ಕಟ್ಟಿದ್ದರು. ಆದರೆ ಮೋಟಾರ ವ್ಯವಸಾಯದಲ್ಲಿ ಆಗ ಅಮೇರಿಕೆಗಿಂತ ಯುರೋಪು—ಮುಖ್ಯವಾಗಿ ಜರ್ಮನಿ—೧೦ ವರ್ಷ ಮುಂದಿತ್ತು. ಆದರೆ ಅದಿಂದು ಇಷ್ಟು ದೊಡ್ಡ ರೂಪಕ್ಕೆ, ಅದೂ ಅಮೇರಿಕೆಯಲ್ಲಿ, ಬೆಳೆದೀತೆಂದು ಊಹಿಸಿದವರು ಕಡಿಮೆ. "ಹಾರ್ಸ್‌ಲೆಸ್ ಏಜ್" ( ಕುದುರೆಯಿಲ್ಲದ ಯುಗ ) ಎಂಬ ಹೊಸ ಅಮೇರಿಕನ್ ಪತ್ರಿಕೆಯೊಂದು ೧೮೯೫ ರಲ್ಲಿಯೇ ಪ್ರಚಂಡ ಉದ್ಯಮವೊಂದು ಅಸ್ತಿತ್ವಕ್ಕೆ ಬರುತಿದೆಯೆಂದು ದಿಟ್ಟತನದ ಭವಿಷ್ಯ ನುಡಿದಿತ್ತು.

೧೯೦೦ ರಷ್ಟು ಹೊತ್ತಿಗೆ ೪೦೦೦ ಮೋಟಾರ ಗಾಡಿಗಳನ್ನು ಕಟ್ಟಿ ಮಾರಲಾಗಿತ್ತು. ಚಿಕ್ಕ ಚಿಕ್ಕ ವರ್ಕಶಾಪಗಳಿಂದ ಈ ಉದ್ಯೋಗ ದೊಡ್ಡ ದೊಡ್ಡ ಕಾರಖಾನೆಗಳಿಗೆ ಸಾಗಿತ್ತು. ಆದರೆ ಈಗಿನ ಮೋಟಾರಿನ ಮುತ್ತಜ್ಜ ಅಂದರೆ ಬಗಿ ರೂಪ ಬಿಟ್ಟು ನಿಜವಾದ ಗಾಡಿಯ ರೂಪಕ್ಕೆ ಬಂದ ಮೋಟಾರುಗಳು ೧೯೦೫ ರ ವರೆಗೂ ಹುಟ್ಟಲಿಲ್ಲ. ಆ ವರ್ಷ ಜರ್ಮನ್ ಮತ್ತು ಫ್ರೆಂಚ್ ಮಾದರಿಯನ್ನು ಅವಲಂಬಿಸಿ ಅಮೇರಿಕನ್ ಕಂಪನಿಗಳು ಗಾಡಿಗಳ ರಚನೆಗೆ ಕೈಹಾಕಿದವು. ಆ ವರೆಗೆ ಈ ವಾಹನದ ಎಂಜಿನುಗಳು ಹಿಂದಿನ ಆಸನದ ಕೆಳಗೆ ಇರುತಿದ್ದವು. ೧೯೦೫ ರಲ್ಲಿ ಅವುಗಳನ್ನು ವಾಹನದ ಎದುರಿಗೆ ವರ್ಗಾಯಿಸಿದ್ದರಿಂದ ಅದರ ಎತ್ತರವನ್ನು ಕಡಿಮೆ ಮಾಡುವದು ಸಾಧ್ಯವಾಯಿತು. ಹಿಂದಿನಿಂದ ಏರುವ ಬದಲು ಪಕ್ಕದಲ್ಲಿ ಬಾಗಿಲು, ಟಿಲ್ಲರ ಬದಲು ಸ್ಟಿಯರಿಂಗ ಇವು ತೊಂದರೆಯನ್ನು ಕಡಿಮೆ ಮಾಡಿದವು. ನಾಲ್ಕು ಸಿಲಿಂಡರಿನ ಎಂಜಿನ್ನುಗಳಿಂದ ತಾಸಿಗೆ ೬೦ ಮೈಲಿನ ಓಟ ಸಾಧ್ಯವಾಯಿತು. ಅಂದಿನಿಂದೀಚೆಗೆ ಅನಂತ ಸುಧಾರಣೆಗಳನ್ನು ಮಾಡಲಾಗಿದೆ.

೧೯೧೦ ರಷ್ಟು ಹೊತ್ತಿಗೆ ಮೋಟಾರಿನ ಸರಳತೆಯ ಕಾರಣದಿಂದ ಉಗಿಯಿಂದ ಮತ್ತು ವಿದ್ಯುತ್ತಿನಿಂದ ನಡೆಯುವ ವಾಹನಗಳು ಮೂಲೆಗುಂಪಾಗಿದ್ದವು. ಯಂತ್ರಜ್ಞರು ಮೋಟಾರಿನ ಬಿಡಿ ಭಾಗಗಳನ್ನು ಒಂದು ಮಟ್ಟಕ್ಕೆ ತರಲು ಪ್ರಯತ್ನಿಸತೊಡಗಿದ್ದರು. ೧೯೧೮ ರಲ್ಲಿ ಸಾಧಾರಣ ಕಾರಿನ ಬೆಲೆ ೮೦೦ ಡಾಲರುಗಳಿಗೆ ಇಳಿದು ಹೋಗುವಷ್ಟು ಅಧಿಕ ಪ್ರಮಾಣದಲ್ಲಿ ಉತ್ಪಾದನೆಯಾಗಿತ್ತು. ಇದರಿಂದ ಚಿಕ್ಕಪುಟ್ಟ ಮೋಟಾರ ಕಂಪನಿಗಳಿಗೆ ಉಳಿಗಾಲವಿಲ್ಲದಂತಾಯಿತು.

೧೯೨೦ ರಿಂದ ೩೦ ರೊಳಗೆ ಅನೇಕಾನೇಕ ಚಿಕ್ಕ ಕಂಪನಿಗಳು ಹಾಳಾಗಿ ಹೋದವು. ಆರಂಭದಲ್ಲಿ ಈ ಉದ್ಯೋಗದಲ್ಲಿದ್ದ ೧೦೦೦ ಕ್ಕೂ ಹೆಚ್ಚು ಕಂಪನಿಗಳಲ್ಲಿ ೧೦ ಮಾತ್ರ ಇಂದು ಜೀವಂತವಾಗಿ ಉಳಿದಿವೆ.



೧೮೯೩: ಅಮೇರಿಕೆಯಲ್ಲಿ ಮೊದಲನೆ ಬಾರಿ ಮಾರಾಟಕ್ಕಾಗಿ ಸಿದ್ಧವಾದ ಕುದುರೆಯಿಲ್ಲದ ಬಂಡಿ. ಕಟ್ಟಿದವ: ಚಾರ್ಲ್ಸ್ ಡ್ಯುರಿಯಾ. ಎಂಜಿನ್ನು ಗಾಡಿಯ ಕೆಳಗೆ.



೧೮೯೪: ಗಂಟೆಗೆ ೬ ಮೈಲು ಓಡುವ ಗ್ಯಾಸೊಲಾಯಿನ ಕಾರ್. ಎಲ್‌ವುಡ್ ಹೆಯ್ನ್ಸ್ ಕಟ್ಟಿದ್ದು. ಅವನೇ ಅದರಲ್ಲಿ ಕುಳಿತಿದ್ದಾನೆ.



೧೮೯೬: ಚಾರ್ಲ್ಸ್ ಕಿಂಗನ „ಪ್ರಾಯೋಗಿಕ ಬಂಡಿ.'' ಈಗಿನ ಮೋಟಾರಿನಲ್ಲಿನ ಸ್ಟಿಯರಿಂಗ್ ಬದಲು ಟಿಲ್ಲರ್ ಇತ್ತು ಆಗ.



೧೮೯೬: ಹೆನ್ರಿ ಫೋರ್ಡನ ಮೊದಲನೆ ಕಾರ್. ಚತುಶ್ಚಕ್ರಸೈಕಲ್ ಎಂದು ಹೆಸರು. ಮುಂದೆ ಹೋಗುತಿತ್ತು ಹೊರತು ಹಿಂದಲ್ಲ. ಫೋರ್ಡನ ಮೋಟಾರ ಕಂಪನಿ ೧೯೦೩ ರಲ್ಲಿ ಪ್ರಾರಂಭಿಸಲ್ಪಟ್ಟಿತು.



೧೯೦೧: ರ್‍ಯಾನ್ಸಮ್ ಓಲ್ಡ್ಸನ ಮೋಟಾರು. ಇವನೇ ಮೊಟ್ಟಮೊದಲು ದೊಡ್ಡ ಪ್ರಮಾಣದಲ್ಲಿ ಮೋಟಾರ ತಯಾರಿಸಿದವನು.



೧೯೦೧: ಜೇಮ್ಸ್ ಪಿಕಾರ್ಡನ ಕಾರು. ಸ್ಟಿಯರಿಂಗ್ ಚಕ್ರವನ್ನು ಮೊಟ್ಟಮೊದಲು ಉಪಯೋಗಿಸಲಾಯಿತು. ಮಡ್‌ಗಾರ್ಡ್ ಬಂದಿದೆ.



೧೯೦೩: ವಿಂಟನ್ನನ ಬಂಡಿ. ೬೩ ದಿನಗಳಲ್ಲಿ ಅಮೇರಿಕೆಯನ್ನು ಮೊಟ್ಟಮೊದಲು ಗಡಿಯಿಂದ ಗಡಿವರೆಗೆ ಸಂಚರಿಸಿತು. ಎಂಜಿನ್ನನ್ನು ಗಾಡಿಯ ಮುಂದೆ ಹಚ್ಚಲಾಗಿದೆ.



೧೯೦೫: ಬ್ಯೂಕನ ಕಾರಿನಲ್ಲಿ ಪಕ್ಕದಲ್ಲಿ ಬಾಗಿಲು, ಎಂಜಿನ್ನಿಗೆ ಜೀನು ತಟ್ಟಿನಂಥ ಮುಚ್ಚಳ, ಎರಡು ದೀಪಗಳು, ಬೆಲೆ ೧೨೦೦ ಡಾಲರ.



೧೯೦೭: ಫ್ರಾಂಕ್ಲಿನ್ನನ ಮೋಟಾರಿನಲ್ಲಿ ಗಾಳಿಯಿಂದ ತಂಪಾಗುವ ಎಂಜಿನ್ನಿದೆ. ಬೆವೆಲ ಗೇರು ಬಂದುದರಿಂದ ಮುಂದೆ ಮೂರು ಬಗೆಯ ಓಟ ಹಿಂದೊಂದೋಟ ಸಾಧ್ಯವಾಯಿತು.



೧೯೦೯: ಫೋರ್ಡ: ಬಹಳ ಉಪಯುಕ್ತವಾಯಿತು. ಬೆಲೆ ೮೫೦ ಡಾಲರ. ಒಂದು ವರ್ಷದಲ್ಲೇ ದಿನಕ್ಕೆ ೧೦೦ ಕಾರು ಹುಟ್ಟಿದವು.



೧೯೧೧: ಕಾಡಿಲಾಕ ಕಾರಿನಲ್ಲಿ ಮೊದಲನೆ ಬಾರಿ ಇಲೆಕ್ಟ್ರಿಕ್ ಸ್ಟಾರ್ಟರನ್ನು ಬಳಸಲಾಯಿತು. ವಿದ್ಯುತ ದೀಪಗಳೂ ಬಂದಿದ್ದವು



೧೯೧೫: ಸ್ಟಟ್ಸ ಕಾರು ವಿಲಾಸಿಗಳಿಗೆ ಬಹಳ ಪ್ರಿಯವಾಯಿತು. ತಗ್ಗಾದ ಸರಳ ಕಟ್ಟಡಕ್ಕೆ ಮಹತ್ವ.



೧೯೧೫: ಪ್ರಸಿದ್ಧ ಡಾಜ್ ಕಾರು. ಬಹಳ ಯಶಸ್ವಿಯಾಗಿ ಡಾಜ್ ಕಂಪನಿ ಜನಪ್ರಿಯವಾಯಿತು. ಬೆಲೆ ೭೮೫ ಡಾಲರ. ಇಡಿ ಬಾಡಿಯನ್ನು ಉಕ್ಕಿನಿಂದಲೆ ಮಾಡಿದ್ದರು.



೧೯೨೦: ಪೆಕಾರ್ಡ ಕಾರು ೧೨ ಸಿಲಿಂಡರಿನ ೫೦೦೦ ಡಾಲರ ಬೆಲೆಯ ಶ್ರೀಮಂತರ ಸಿಡಾನ್ ಮೋಟಾರು.



೧೯೨೪: ಕ್ರಿಸ್ಲರ್ ಕಂಪನಿಯ ಸ್ವಚ್ಛ ಮಾದರಿಯ ಕಾರು. ನಾಲ್ಕು ಚಕ್ರಗಳ ಹಾಯಡ್ರಾಲಿಕ್ ಬ್ರೇಕ್ ಮೊದಲಾದವುಗಳಿಂದ ಹೊಸ ರೀತಿಯನ್ನಾರಂಭಿಸಿತು.



೧೯೨೮: ಫೋರ್ಡ ಹಳೆಯ ಮಾದರಿ ಮೂಲೆಗೆ ಬಿದ್ದು ಶವರ್ಲೆ ಕಾರುಗಳಿಗೆ ಗಿರಾಕಿ ಹೆಚ್ಚಾದ್ದರಿಂದ ಫೋರ್ಡನೂ ಮಾದರಿ ಬದಲಿಸಿದ.



೧೯೩೨: ಗ್ರಾಹ್ಯಾಮನ ತಿದ್ದಿದ ಸುಂದರ ಆಕಾರದಮಾದರಿ. ಲಗೇಜ ಟ್ರಂಕ ಇಡುವ ವ್ಯವಸ್ಥೆ ಮತ್ತು ಬಿಳಿ ಟಾಯರುಹೊಸವು.



೧೯೩೪-೩೭: ಕ್ರಿಸ್ಲರನ ಏರ್‌ಫ್ಲೊ ಕಾರು ಮೊದಲನೆ ಸ್ಟ್ರೀಮ್ ಲಾಯಿನ ಕಾರು. ಅದು ಅಷ್ಟು ಯಶಸ್ವಿಯಾಗಲಿಲ್ಲ.



೧೯೪೦: ಬ್ಯೂಕ್ ಕಂಪನಿಯ ಆರು ಜನರ ಗಾಡಿ. ಸುರುಳಿ ಸ್ಪ್ರಿಂಗ್ ಮತ್ತು ಮೊಣಕಾಲಿನ ಕೆಲಸ ಮೊದಲಾದವುಗಳಿಂದ ಹೊಸದು. ಫುಟ್‌ಬೋರ್ಡ ಮಾಯವಾಗಿದೆ.



೧೯೪೭: ಸ್ಟುಡ್‌ಬೇಕರ. ನಿಜವಾದ ಯುದ್ಧೋತ್ತರ ಮೋಟಾರ ಕಾರು. ಸುಂದರವಾಗಿಯೂ ಅಗಲವಾಗಿಯೂ ವಿಮಾನದಂತೆ ತೋರುತಿದೆ.

# ಅಂತರ್ ರಾಷ್ಟ್ರೀಯ

## ವಾಲೇಸರ ಬಾಂಬು

ಅಮೇರಿಕನ್ ಮುಂದಾಳುಗಳು ಒಬ್ಬರ ಹಿಂದೊಬ್ಬರು ಜಗತ್ತನ್ನು ಬೆಚ್ಚಿಸುವ ಕೆಲಸ ಕೈಕೊಂಡಂತಿದೆ. ಹಿಂದಿನ ವಾರದಲ್ಲಿ ವಿದೇಶ ಮಂತ್ರಿ ಬರ್ನ್ಸರು ಜರ್ಮನಿಯ ಭವಿತವ್ಯವನ್ನು ಕುರಿತು ಮಾಡಿದ ಭಾಷಣದ ಪರಿಣಾಮವನ್ನು ಕಳೆದ ವಾರ ಪ್ರಸ್ತಾಪಿಸಲಾಗಿತ್ತು. ಈ ವಾರ ಅಮೇರಿಕನ್ ವಾಣಿಜ್ಯಮಂತ್ರಿ ಹೆನ್ರಿವಾಲೇಸರು ಅಷ್ಟೇ ಆಶ್ಚರ್ಯಕರ ಭಾಷಣದಿಂದ ಅಮೇರಿಕನ್ ರಾಜಕಾರಣದಲ್ಲಿರುವ ಒಡಕನ್ನು ಪ್ರದರ್ಶಿಸಿದರು. ಎಡ ಪಕ್ಷಗಳ ಸಭೆಯೊಂದರಲ್ಲಿ ಮಾತಾಡುತ್ತ ಅವರು, "ನಮಗೆ ಬ್ರಿಟಿಶರ ಗೆಳೆತನ ಬೇಕು ಅವರಲ್ಲಿ ನಮ್ಮ ಪ್ರೀತಿಯೂ ಇದೆ. ಆದರೆ ನಾವು ಜಗತ್ತನ್ನು ಬ್ರಿಟಿಶ ಸಾಮ್ರಾಜ್ಯವಾದದ ಕಣ್ಣುಗಳಿಂದ ನೋಡದೆ ನಮ್ಮ ಸ್ವಂತ ಅಮೇರಿಕನ್ ದೃಷ್ಟಿಯಿಂದ ನೋಡಬೇಕು... ಜಗತ್ತಿನ ಶಾಂತಿಗಾಗಿ ನಾವು ರಶಿಯಾದೊಡನೆ ಕಡಿಮೆ ಕಠೋರತೆಯಿಂದ ನಡೆದುಕೊಳ್ಳಬೇಕು...." ಇತ್ಯಾದಿಯಾಗಿ ಹೇಳಿದರು. ಇದು ಬರ್ನ್ಸರು ಶಾಂತಿ ಪರಿಷತ್ತಿನಲ್ಲಿ ವಹಿಸಿದ ಧೋರಣಕ್ಕೆ ತೀರ ವ್ಯತಿರೇಕವಾಗಿತ್ತು. ವಾಲೇಸರ ಈ ಭಾಷಣದಿಂದ ಇಡಿ ಅಮೇರಿಕೆಯಲ್ಲಿ ಮಾತ್ರವಲ್ಲ. ಇಂಗ್ಲಂಡಿನಲ್ಲೂ ಆಲ್ಲೋಲ ಕಲ್ಲೋಲ ಪ್ರಾರಂಭವಾಯಿತು. ಪರಿಣಾಮವಾಗಿ, ಭಾಷಣದ ಮರುದಿನ ವಾಲೇಸರ ಭಾಷಣ ಅಮೇರಿಕನ್ ಧೋರಣೆಗೆ ಅನುಸಾರವಾಗಿಯೆ ಇದೆಯೆಂದು ಹೇಳಿದ್ದ ಅಧ್ಯಕ್ಷ ಟ್ರೂಮನ್ನರು ತಮ್ಮ ಮಾತನ್ನು ತಾವೇ ತಿರುಗಿಸಿ ಅದು ಸರಕಾರದ ಧೋರಣವಲ್ಲವೆಂದು ಸಾರಬೇಕಾಯಿತು. ವಾಲೇಸರ ಭಾಷಣವೊಂದು ರಾಜಕೀಯ ನಟನೆ, ಅವರು ಮುಂದಿನ ಸಲ ಉಪಾಧ್ಯಕ್ಷ ಪದವಿಗೆ ಡೆಮಾಕ್ರಟಿಕ್ ಪಕ್ಷದಿಂದ ನಿಲ್ಲಬೇಕೆಂದಿದ್ದಾರೆ. ಅದಕಾಗಿ ಈ ರೀತಿ ಟ್ರೂಮನ್ ಧೋರಣೆಗೆ ವಿರೋಧವಾದ ಮಾತುಗಳನ್ನಾಡಿದರು. ಎಂಬದಾಗಿ ವಾಲೇಸರ ವಿರೋಧಿಗಳು ಹೇಳಿದರೂ ಅಧ್ಯಕ್ಷ ರೂಜವೆಲ್ಟರ ಮರಣಾನಂತರ ಟ್ರೂಮನ್ನರ ಕಳಗೆ ಅಮೇರಿಕೆ ರಶಿಯಾ—ವಿರೋಧಿ ಧೋರಣೆಯನ್ನು ಬೆಳೆಸುತಿದೆಯೆಂದೂ ಬ್ರಿಟಿಶ ಪ್ರಭಾವ ತಿರುಗಿಸಿದತ್ತ ಅವರು ತಿರುಗುತಿದ್ದಾರೆಂದೂ ಅನೇಕ ಅಮೇರಿಕನ್ನರಿಗೆ ಎನಿಸದೆ ಇಲ್ಲ. ವಾಲೇಸರು ಅಂಥವರಲ್ಲೊಬ್ಬರೆಂದು ಹೇಳಬಹುದು. ರಶಿಯಾದೊಡನೆ ಸೌಹಾರ್ದವಿದ್ದರೆ ಮಾತ್ರ ಶಾಂತಿ ಸಾಧ್ಯವಿದೆಯೆಂದು ಅವರು ಕಂಡುಕೊಂಡಿದ್ದಾರೆ. ಅವರ ಭಾಷಣವನ್ನೀಗ ಟ್ರೂಮನ್ನರು ಧಿಕ್ಕರಿಸಿರುವದರಿಂದ ಡೆಮಾಕ್ರೆಟಿಕ ಪಕ್ಷದಲ್ಲಿ ಒಡಕುಂಟಾಗಿದೆ. ಇದರಿಂದ ಈಗಾಗಲೆ ಬಲಿಷ್ಠರಾಗಿರುವ ರಿಪಬ್ಲಿಕನ್ ಪಕ್ಷದವರಿಗೆ ಸಂತೋಷವಾಗಿದೆ. ಮುಂದಿನ ಚುನಾವಣೆಯಲ್ಲಿ ರಿಪಬ್ಲಿಕನ್ನರೇ ಗೆದ್ದರೆ ಆಶ್ಚರ್ಯವಿಲ್ಲ.

## ಸಾಮ್ರಾಜ್ಯವಾದ ಸತ್ತುಹೋಗಿದೆ!

ಹೆನ್ರಿ ವಾಲೇಸರ ಭಾಷಣದಲ್ಲಿ "ಬ್ರಿಟಿಶ ಸಾಮ್ರಾಜ್ಯವಾದ"ದ ಬಗೆಗೆ ಬಂದ ಉಲ್ಲೇಖದಿಂದ ಬ್ರಿಟಿಶ ಸಾಮ್ರಾಜ್ಯದ "ಚರ್ಚಿಲ" ಅಭಿಮಾನಿಯಾದ ಜನರಲ್ ಸ್ಮಟ್ಸರಿಗೆ ಸ್ವಾಭಾವಿಕವಾಗಿ ನೋವಾಗಿದೆ. ಅವರು, "ಬ್ರಿಟಿಶ ಸಾಮ್ರಾಜ್ಯವಾದವನ್ನು ತೆಗಳುವ ಅಮೇರಿಕನ್ ಗೆಳೆಯರು, ಯಾವ ಆನೆಯನ್ನು ನೋಡಿ ಬಗುಳಬೇಕೋ ಅದನ್ನು ಬಿಟ್ಟು ಬೇರೊಂದು ಆನೆಯನ್ನು ನೋಡಿ ಬಗುಳುತಿದ್ದಾರೆ," ಎಂದು ಹೇಳಿದ್ದಾರೆ. ಜಗತ್ತನ್ನು ಉಳಿಸುವಗೋಸುಗ ಬ್ರಿಟಿಶ ಸಾಮ್ರಾಜ್ಯವಾದ "ಸತ್ತು ಹೋಗಿದೆ" ಯೆಂದೂ ಈಗ ಬೇರೆ ಸಾಮ್ರಾಜ್ಯವಾದಗಳು—ರಾಷ್ಟ್ರೀಯ ಹಾಗು ಧ್ಯೇಯ ಸಂಬಂಧಿ—ಹುಟ್ಟಿಕೊಂಡಿವೆಯೆಂದೂ ಅವರ ಅಂಬೋಣ. ಬ್ರಿಟಿಶ ಸಾಮ್ರಾಜ್ಯ ಜಗತ್ತಿನಲ್ಲಿ ಸ್ವಾತಂತ್ರ್ಯದ ಸಂದೇಶವನ್ನು ಬೀರಿ ರಂಗದಿಂದ ಮರೆಯಾಗಿದೆಯಂತೆ. ಹಿಂದುಸ್ಥಾನದ ಉದಾಹರಣೆಯನ್ನು ಅವರು ಈ ಸಂಬಂಧದಲ್ಲಿ ಉಲ್ಲೇಖಿಸಿದ್ದಾರೆ. ಬ್ರಿಟಿಶರು ಈ ದೇಶವನ್ನು ಬಿಟ್ಟು ಹೋಗುವಾಗ ಮಾಡಿಟ್ಟಿರುವ ಚಲ್ಲಾಪಿಲ್ಲಿ ಬ್ರಿಟಿಶ ಸಾಮ್ರಾಜ್ಯದ ಉಪಕಾರವನ್ನು ಅನೇಕ ದಶಕಗಳ ವರೆಗೆ ನಾವು ನೆನೆಯುವಂತೆ ಮಾಡಿಟ್ಟಿಲ್ಲವೆ?

## ಮೊಲಟೋವರ ಉತ್ತರ

ಅಮೇರಿಕನ್ ವಿದೇಶ ಮಂತ್ರಿ ಬರ್ನ್ಸರು ಸ್ಟಡ್‌ಗಾರ್ಟಿನಲ್ಲಿ ಮಾಡಿದ ಭಾಷಣದ ಸಾರವನ್ನೂ ಧ್ವನಿಯನ್ನೂ ಗ್ರಹಿಸಲು ಸಾಕಷ್ಟು ಸಮಯವನ್ನು ತೆಗೆದುಕೊಂಡ ನಂತರ ರಶಿಯನ್ ವಿದೇಶ ಮಂತ್ರಿ ಮೊಲಟೋವರು ಅದರ ಲ್ಲೊಂದಂಶಕ್ಕೆ ಉತ್ತರ ಕೊಟ್ಟಿದ್ದಾರೆ. ಬರ್ನ್ಸರು ತಮ್ಮ ಭಾಷಣದಲ್ಲಿ ಪೋಲಂಡದ ಪಶ್ಚಿಮಗಡಿ (ಅಂದರೆ ಜರ್ಮನಿಯ ಪೂರ್ವಗಡಿ) ಇನ್ನೂ ನಿರ್ಧಾರವಾಗಿಲ್ಲವೆಂದು ಹೇಳಿದ್ದರು. ಅರ್ಥಾಂತರದಿಂದ ಪೋಲಂಡು ಈಗೊಂದು ವರ್ಷದಿಂದ ಆಕ್ರಮಿಸಿಕೊಂಡಿರುವ ಸೈಲೇಶಿಯಾ ಮತ್ತು ಇತರ ಜರ್ಮನ್ ಪ್ರದೇಶಗಳು ಪೋಲಂಡಿಗೆ ಸೇರಬೇಕೆಂಬ ಬಗ್ಗೆ ಇನ್ನೂ ಕೊನೆಯ ನಿರ್ಣಯವಾಗಿಲ್ಲವೆಂದು ಅವರು ಹೇಳಬಯಸಿದ್ದರು. ಆದರೆ ಮೊಲಟೋವರು ಅವರ ಹೇಳಿಕೆಯನ್ನು ತುಂಡುತುಂಡಾಗಿ ಕತ್ತರಿಸಿದ್ದಾರೆ. ಬರ್ಲಿನ್ ಪರಿಷತ್ತಿನಲ್ಲಿ ತ್ರಿಮೂರ್ತಿಗಳು ಈ ಭಾಗಗಳನ್ನು ಜರ್ಮನಿಯಿಂದ ಕಸಿದುಕೊಂಡು ಪೋಲಂಡಿಗೆ ಕೊಡಬೇಕೆಂದು ಒಪ್ಪಿಕೊಂಡಿದ್ದರು ಮತ್ತು ಅದಕ್ಕೆ ಸಹಿ ಹಾಕಿದವರಲ್ಲಿ ಅಧ್ಯಕ್ಷ ಟ್ರೂಮನ್ನರೂ ಒಬ್ಬರಾಗಿರುತ್ತ, ಈಗ ಅಮೇರಿಕನ್ ವಿದೇಶ ಮಂತ್ರಿಗಳು ಇದರ "ನಿರ್ಧಾರ" ಇನ್ನೂ ಆಗಿಲ್ಲವೆಂದು ಹೇಗೆ ಹೇಳುವರೆಂದು ಅವರು ಕೇಳಿದ್ದಾರೆ. ಮೊಲಟೋವರು ಅದರ ಜತೆ ಕೆಲ ಅಂಕೆಗಳನ್ನೂ ಕೊಟ್ಟಿದ್ದಾರೆ: ತ್ರಿಮೂರ್ತಿಗಳ ನಿರ್ಣಯದಂತೆ ಆ ಜರ್ಮನ್ ಭಾಗಗಳಲ್ಲಿದ್ದ ೩೫ ಲಕ್ಷ ಜರ್ಮನ್ನರನ್ನು ಜರ್ಮನಿಯ ಉಳಿದ ಪ್ರದೇಶಗಳಿಗೆ ವರ್ಗಾಯಿಸುವ ಕೆಲಸ ಈಗಾಗಲೇ ಭರದಿಂದ ನಡೆದಿದೆ. ೨೦ ಲಕ್ಷ ಜರ್ಮನ್ನರನ್ನು ಈಗಾಗಲೆ ಅಲ್ಲಿಂದ ಹೊರಗೆ ಹಾಕಿ ಸೋವಿಯಟ ಮತ್ತು ಬ್ರಿಟಿಶ ಆಕ್ರಮಿತ ಜರ್ಮನಿಯಲ್ಲಿ ನೆಲೆಗೊಳಿಸಲಾಗಿದೆ. ಅವರ ಸ್ಥಾನದಲ್ಲಿ ಪೋಲರು ನೆಲಸಿದ್ದಾರೆ. ಇದು ಎಲ್ಲರಿಗೂ ಚೆನ್ನಾಗಿ ಗೊತ್ತಿದೆಯೆಂದು ಅವರು ತಿಳಿಸಿದ್ದಾರೆ. ಬರ್ನ್ಸರ ವಾದದ ಟೊಳ್ಳುತನವನ್ನು ಇದು ಬಯಲಿಗೆಳೆದಿದೆಯಲ್ಲದೆ ಜರ್ಮನರು ತಮ್ಮ ಸೋಲಿಗೆ ಎಂಥ ಬೆಲೆ ತೆರುತಿದ್ದಾರೆಂಬುದರ ಅರಿವನ್ನೂ ಮಾಡಿಕೊಡುತ್ತದೆ.

## ಶಾಂತಿ ಪರಿಷತ್ತು

ಶಾಂತಿ ಪರಿಷತ್ತಿನಲ್ಲಿ ಈ ವಾರ ಮೊದಲನೆ ಬಾರಿ ಹಿಂದೀ ಶಿಷ್ಟಮಂಡಲದವರು ಬ್ರಿಟಿಶ ಶಿಷ್ಟಮಂಡಲದ ವಿರುದ್ಧ ಮತವಿತ್ತು ಹಿಂದುಸ್ಥಾನದಲ್ಲಿ ಪ್ರಾರಂಭವಾದ ಹೊಸ ಯುಗದ ಮುದ್ರೆಯನ್ನೊತ್ತಿದ್ದಾರೆ. ವಿಷಯವೇನು ಅಷ್ಟು ಮಹತ್ವದ್ದಿಲ್ಲ. ರುಮೇನಿಯಾದ ಶಾಂತಿ ಒಪ್ಪಂದದಲ್ಲಿ, ಆ ದೇಶದ ಬಂದರಗಳಲ್ಲಿ ಮಿತ್ರ ಹಡಗಗಳಿಗಾದ ಹಾನಿಯನ್ನು ತುಂಬಿಕೊಡಬೇಕೆಂಬ ಕಲಮು ಸೇರಿಸಲು ಬ್ರಿಟಿಶರು ಪ್ರಯತ್ನಿಸಿದರು. ಇದರ ವಿರುದ್ಧ ಮತವಿತ್ತ ೮ ರಾಷ್ಟ್ರಗಳಲ್ಲಿ ಹಿಂದುಸ್ಥಾನವೂ ಒಂದು. ಬ್ರಿಟಿಶ ಸೂಚನೆ ಸೋಲಿಸಲ್ಪಟ್ಟಿತು.

ಪರಿಷತ್ತಿನಲ್ಲಿ ಟ್ರೆಸ್ಟೆ ಪ್ರಶ್ನೆ ಇನ್ನೂ ಬಗೆಹರಿದಿಲ್ಲ. ಯುಗೋಸ್ಲಾವಿಯಾ ಮತ್ತು ಸೋವಿಯೆಟ್ ಪ್ರತಿನಿಧಿಗಳು ಅಂಗ್ಲೊ—ಫ್ರೆಂಚ—ಅಮೇರಿಕನ್ ಅಭಿಪ್ರಾಯಕ್ಕೆ ಬದ್ಧವಿರೋಧ ತೋರಿದ್ದಾರೆ. ಟ್ರೆಸ್ಟೆಯ ಅಂತರ್ ರಾಷ್ಟ್ರೀಕರಣವಾಗಿ ಅದರ ರಕ್ಷಣೆಗೆ ಪ್ರಬಲ ಸೇನೆಯಿರಬೇಕೆಂದು ಪಶ್ಚಿಮ ರಾಷ್ಟಗಳು ಹೇಳಿದರೆ ಹೀಗೆ ಸೈನ್ಯವಿಡುವದು ಯುಗೊಸ್ಲಾವಿಯಾಕ್ಕೆ ಗಂಡಾಂತರಪ್ರಾಯವೆಂದು ಪೂರ್ವರಾಷ್ಟ್ರಗಳು ಛಲ ಹಿಡಿದಿವೆ. ಎರಡೂ ಪಕ್ಷಗಳೂ ತಮ್ಮ ಹಟಬಿಡುವ ಲಕ್ಷಣವಿಲ್ಲ.

## ನಡುಗಾಲ ಸರಕಾರದ ಸಮಸ್ಯೆಗಳು

(೧ನೇ ಪುಟದಿಂದ ಮುಂದರಿದುದು)

ಮುಗಿದೊಡನೆ ಒಮ್ಮೆಲೆ ಮುಗ್ಗಟ್ಟು ತಲೆದೋರಲಿಕ್ಕಿಲ್ಲ; ಕೆಲಕಾಲ ಉಬ್ಬರವೇ ಉಂಟಾಗುವ ಲಕ್ಷಣವಿದೆಯಾದುದರಿಂದ ಮುಗ್ಗಟ್ಟನ್ನು ಅಥವಾ ವ್ಯತಿಪ್ರಸರಣವನ್ನು ತಡೆಯುವ ಉಪಾಯಗಳನ್ನು ತಡೆಹಿಡಿಯಿರೆಂಬ ಪ್ರೊ. ಸಿ. ಎನ್. ವಕೀಲರ ಮತ ಹಲ ಅರ್ಥಶಾಸ್ತ್ರಿಗಳಿಗಾಗಲಿ] ಸರಕಾರಕ್ಕಾಗಲಿ ರುಚಿಸಲಿಲ್ಲ. ಆದರೆ ಅರ್ಥಶಾಸ್ತ್ರಿಗಳ ಊಹೆಯನ್ನು ಸುಳ್ಳುಮಾಡಿ ಬೆಲೆಗಳು ಅಸಾಧ್ಯ ಏರತೊಡಗಿವೆ. ಇದರಿಂದ ಜೀವನದ ವೆಚ್ಚ ಹೆಚ್ಚಾಗಿ ಹೆಚ್ಚು ಸಂಬಳಕ್ಕಾಗಿ ಕೂಲಿಕಾರರು ಮಾತ್ರವಲ್ಲ, ಮಧ್ಯಮ ವರ್ಗದ ನೌಕರರು ಕೂಡ ಸಂಪುಗಳನ್ನು ಹೂಡಿ ತಮ್ಮ ಕ್ಷೇಷವನ್ನು ಪ್ರದರ್ಶಿಸುವಂತಾಗಿದೆ.

### ತಪ್ಪು ಲೆಕ್ಕಾಚಾರ

ಮುಗ್ಗಟ್ಟಿನ ಪರಿಸ್ಥಿತಿ ಪ್ರತ್ಯಕ್ಷವಾದ ಹೊರತು ವ್ಯತಿಪ್ರಸರಣ (Deflation) ನಿರೋಧಕ ಕ್ರಮಗಳನ್ನು ಕೈಕೊಂಡದ್ದು ಜಾಣತನವಾಗಲಿಲ್ಲ. ಬದಲಿಗೆ ಹಿಂದುಸ್ಥಾನದಲ್ಲಿ ಬೆಲೆಗಳ ಪರಮಾವಧಿ ಮುಟ್ಟಿವೊಂದನ್ನು—ಈಗಿನಕಿಂತ ಇಳಿಮಟ್ಟದಲ್ಲಿ—ನಿರ್ಣಯಿಸಬೇಕಾಗಿತ್ತು. ಆದರೆ ಉತ್ಪಾದನೆ ಹೆಚ್ಚಿದರೆ ತಂತಾನೆ ಬೆಲೆ ಇಳಿಯುವದೆಂಬ ತತ್ವವನ್ನು ಹಿಡಿದುಕೊಂಡು ಸರಕಾರ ತಪ್ಪು ಹೆಜ್ಜೆಯಿಟ್ಟಿತು. ಇದೇ ದೃಷ್ಟಿಯಿಂದ ಔದ್ಯೋಗಿಕ ವಿಸ್ತರಣ ಮಾಡಬಯಸುವ ಉದ್ದಿಮೆಗಾರರಿಗೆ ಉತ್ತೇಜನವೆಂದು ಅಧಿಕ ಲಾಭದ ತೆರಿಗೆಯನ್ನು ರದ್ದುಗೊಳಿಸಲಾಯಿತು. ಇದಲ್ಲದೆ ಬಡ್ಡಿದರ ಕಡಿಮೆಯಾದರೆ ಉದ್ದಿಮೆಗಳಿಗೆ ಹುರುಪು ಬರುವದೆಂದೆಣಿಸಿ ೩ [ಸಲ ಬಡ್ಡಿಯ ಸರಕಾರಿ ಪತ್ರಗಳನ್ನು ಮುಟ್ಟಿಸಿ ೨॥ ದರದ ಹೊಸ ಸಾಲವನ್ನು ಸರಕಾರ ಎತ್ತಿತು. ಆದರೆ ಉದ್ಯೋಗಗಳಿಗೆ ಆರ್ಥಿಕ ಉತ್ತೇಜನ ಕೊಟ್ಟ ಮಾತ್ರಕ್ಕೆ ಅವು ಬೆಳೆಯಲಾರವೆಂದು ಅವರು ಬಗೆಯದೆ ಹೋದರು. ಹಳೆಯ ಉದ್ಯೋಗಗಳ ಪುನರ್ವ್ಯವಸ್ಥೆಗೂ ಹೊಸವುಗಳ ಉದಯಕ್ಕೂ ಯಂತ್ರ ಮೊದಲಾದ ಮೂಲ ವಸ್ತುಗಳು ಅವಶ್ಯ. ಅವು ದೊರಕದಿದ್ದರೆ ಹಣವೇನು ಮಾಡೀತು. ಇಂಗ್ಲಂಡಿನಲ್ಲಾಗಲಿ ಅಮೇರಿಕೆಯಲ್ಲಾಗಲಿ ಬಯಸಿದಷ್ಟು ಬೇಗನೆ ಸಿಗಲಿಲ್ಲ, ಸಿಗುವಂತಿಲ್ಲ. ಪರಿಣಾಮವಾಗಿ ಅಧಿಕ ಲಾಭದ ತೆರಿಗೆಯಿಂದ ಮುಕ್ತರಾದ ಶ್ರೀಮಂತರ ಬೊಕ್ಕಸ ಆಕಾರ ಬೆಳೆದವು. ಹಣ ಹೊಸ ಉದ್ಯಮಗಳಲ್ಲಿ ತೊಡಗುವ ಬದಲು ಹಳೆ ಉದ್ಯಮಗಳ ಪಾಲುಗಳಲ್ಲಿ ಮೇಲಾಟ ಮಾಡಲು ಉಪಯೋಗಿಸಲ್ಪಟ್ಟಿತು. ಅವುಗಳ ಬೆಲೆ ಅಗಾಧವಾಗಿ ಏರಿತು. ಯುದ್ಧಕಾಲದಲ್ಲಿಯೆ ಬಡವ ಬಲ್ಲಿದರಲ್ಲಿ ಅಂತರಾಳ ಬೆಳೆದಿತ್ತು. ಅದು ಈ ಕ್ರಮಗಳಿಂದ ಇನ್ನಷ್ಟು ಹೆಚ್ಚಾಯಿತು. ಶ್ರೀಮಂತರಿಗೆ ಅನಾಯಾಸ ಲಾಭವಾಗಿ ಬೆಲೆಗಳ ಮಟ್ಟ ಏರಲು ಕಾರಣವಾಯಿತು.

### ಮಧ್ಯಮ ವರ್ಗದ ಪಾಡು

ಬಡವ ಬಲ್ಲಿದರ ಅಂತರ ಅಗಲಿಸಿದ್ದರ ದುಷ್ಪರಿಣಾಮ ಎಲ್ಲರಿಗಿಂತ ಹೆಚ್ಚಾಗಿ ಮಧ್ಯಮ ವರ್ಗದ ಜನರನ್ನು ಕಾಡುತಿದೆ. ಅವರ ಸ್ಥಿತಿ ಕೂಲಿಕಾರರಿಗಿಂತಲೂ ಕಳತೆಯದೆಂದರೆ ತಪ್ಪಾಗದು. ಕೂಲಿಕಾರ ಕುಟುಂಬಗಳಲ್ಲಿ ತಿಂಬವರು ಬಹಳಾದಂತೆ ದುಡಿವವರೂ ಹೆಚ್ಚು. ಮಧ್ಯಮ ವರ್ಗದ ಕುಟುಂಬದಲ್ಲಿ ತಿಂಬವರು ಹೆಚ್ಚು ದುಡಿಯುವವ ನೊಬ್ಬ. ಹೀಗಾಗಿ ಅವರು ಸಂಕಟಕ್ಕೆ ಗುರಿಯಾಗಿದ್ದಾರೆ. ಅವರ ಹಿಂದಿನ ಉಳಿಕೆಗಳೂ ಕರಗತೊಡಗಿವೆ. ಬಡ್ಡಿ ಧಾರಣೆ ಕಡಿಮೆಯಾದುದರಿಂದಲೂ ಅವರಿಗೆ ಧಕ್ಕೆಯೊದಗಿದೆ. ತಮ್ಮ ಜೀವನದ ಮಟ್ಟವನ್ನು ಅವರು ಉಳಿಸಿಕೊಳ್ಳಲಾರದಾಗಿದ್ದಾರೆ. ಈಚೆಗೆ ನಡೆದಿರುವ ಕಾರಕೂನ ಮೊದಲಾದವರ ಸಂಪುಗಳು ಈ ವರ್ಗದ ತೀವ್ರ ಅಸಂತುಷ್ಟಿಯ ದ್ಯೋತಕವಾಗಿವೆ. ದೈನಂದಿನ ರಾಜಕಾರಣದಲ್ಲಿ ಆಸಕ್ತಿ ವಹಿಸಿರುವ, ರಾಜಕೀಯ ಚಳವಳಿಯಲ್ಲಿ ಅರಿತು ಭಾಗವಹಿಸಿರುವ ಈ ವರ್ಗದ ಅಸಂತುಷ್ಟಿಯನ್ನು ಹೋಗಲಾಡಿಸದಿದ್ದರೆ ಅವರು ಕ್ರಾಂತಿಕಾರಕ ಮಾರ್ಗವನ್ನು ಅನುಸರಿಸಿ ದೇಶದಲ್ಲಿ ವಿಷಣ್ಣ ಪರಿಸ್ಥಿತಿಯನ್ನು ತಂದೊಡ್ಡ ಬಹುದು.

ಈ ಸಮಸ್ಯೆಗಳನ್ನು ಬಗೆಹರಿಸಲು ನಡುಗಾಲ ಸರಕಾರ ಒಡನೆ ಕೆಲಸದಲ್ಲಿ ತೊಡಗಬೇಕಾಗಿದೆ. ಅತಿಪ್ರಸರಣ ನಿರೋಧಕ ಉಪಾಯಗಳನ್ನು ಪ್ರಾರಂಭಿಸಲು ಇನ್ನು ತಡಮಾಡಬಾರದು. ಬೆಲೆಗಳನ್ನು ಯೋಗ್ಯ ಮಟ್ಟದಲ್ಲಿ ನಿಲ್ಲಿಸಲು ಪ್ರಯತ್ನಿಸಬೇಕು. ತೆರಿಗೆಯ ಧೋರಣೆಯಲ್ಲಿಯೂ ಬೇರ್ಪಾಡು ಅವಶ್ಯವುಂಟು. ಕೆಲವರಿಗೆ ಅಹಿತವಾದರೂ ಹಲವರ ಹಿತದೃಷ್ಟಿಯಿಂದ ತೆರಿಗೆ ಹೊರಿಸಬೇಕು. ಶ್ರೀಮಂತರ ಕೈಲಿ ಹೆಚ್ಚು ಹಣವುಳಿಸಬೇಕಾದರೆ ಮೊದಲು ಹಣವನ್ನು ಉತ್ಪಾದಕ ಕ್ರಿಯೆಯಲ್ಲಿ ತೊಡಗಿಸಲು ಅವಶ್ಯವಾದ ಅನುಕೂಲತೆಗಳನ್ನು ಒದಗಿಸಿರಬೇಕು. ಯಂತ್ರಸಾಮುಗ್ರಿಗಳ ಆಯಾತವಾದರೆ ಉತ್ಪಾದಕ ಕ್ರಿಯೆ ತೀವ್ರವಾಗಬಲ್ಲದೆಂಬುದನ್ನು ಮನಗಾಣದಿದ್ದರೆ ಶ್ರೀಮಂತರ ಕೈಲಿದ್ದ ಹಣ ಬೆಲೆ—ಕೂಲಿದರಗಳ ಮೇಲಾಟದಲ್ಲಿಯೆ ಪರ್ಯವಸಾನ ಹೊಂದದಿರದು.

### ಬಾಹ್ಯಪ್ರಭಾವ

ಈ ಸಮಸ್ಯೆಗಳಲ್ಲಿ ಬಾಹ್ಯ ಪ್ರಭಾವದ ಅಂಗವೂ ಹೆಚ್ಚು ಹೆಚ್ಚು ಗೋಚರವಾಗದಿರದು. ಅಂತರ್ ರಾಷ್ಟ್ರೀಯ ಹಣಕಾಸಿನ ನಿಧಿಯ ಸದಸ್ಯನಾಗಿರುವ ಹಿಂದುಸ್ಥಾನ ಸ್ಟರ್ಲಿಂಗ್ ಮತ್ತು ಡಾಲರುಗಳ ಪ್ರಭಾವಕ್ಕೊಳಗಾಗುವದು. ಸ್ವಾಭಾವಿಕ ಚಿನ್ನ ಅಥವಾ ಡಾಲರಿಗೆ ಹೊಂದಿಕೊಂಡು ನಾವು ರೂಪಾಯಿಯ ವಿನಿಮಯ ದರವನ್ನು ನಿರ್ಣಯಿಸಬೇಕಾಗುವದು. ಇಂಗ್ಲಂಡ್, ಅಮೇರಿಕೆಗಳಲ್ಲಿ ಅತಿಪ್ರಸರಣದ ಭಯ ಬಹಿರಂಗವಾಗಿ ವ್ಯಕ್ತಗೊಳಿಸಲ್ಪಡುತಿದೆ. ಇದರ ಪರಿಣಾಮ ನಮ್ಮ ಹಣಕಾಸಿನ ಮೇಲೆ ಹೇಗಾಗುವದೋ ಈಗ ಹೇಳುವದು ಕಠಿಣ. ಅಂತರ್ ರಾಷ್ಟ್ರೀಯ ವ್ಯಾಪಾರವನ್ನು ಹೆಚ್ಚಿಸಿ ಒಂದು ಅಂತರ್ ರಾಷ್ಟ್ರೀಯ ವ್ಯಾಪಾರದ ಸ್ವಭಾವವನ್ನು ಅಂಕೆಯಲ್ಲಿಡುವ ಪ್ರಯತ್ನ ನಡೆದಿದೆ. ಇದರ ಪರಿಣಾಮ ನಮ್ಮ ಆರ್ಥಿಕ ಪ್ರಣಾಲಿಯ ಮೇಲೋಗುವಾಗ ನಮ್ಮ ಬೆಲೆಗಳನ್ನೂ ನಾವೆಷ್ಟು ಮಟ್ಟಿಗೆ ಹಿಡಿತದಲ್ಲಿಟ್ಟುಕೊಳ್ಳಬಲ್ಲೆವೋ ಗೊತ್ತಿಲ್ಲ. ಇದಲ್ಲದೆ ಸ್ಟರ್ಲಿಂಗ್ ಶಿಲ್ಕಿನ ಪ್ರಶ್ನೆಯನ್ನು ಬೇಗನೆ ಬಗೆಹರಿಸುವದು ಅವಶ್ಯ. ಹೆಚ್ಚಿನ ಯಂತ್ರಸಾಮುಗ್ರಿಯನ್ನು ತರಿಸಲು ಸರಕಾರ ಅದನ್ನು ಪಯೋಗಿಸಲು ಪ್ರಯತ್ನಿಸಬೇಕು.

ಹೀಗೆ ಗಹನವಾದ ಸಮಸ್ಯೆಗಳನ್ನು ಹಿಂದಿನ ಸರಕಾರ ನಮ್ಮ ಮುಂದಾಳುಗಳಿಗಾಗಿ ಸಿದ್ಧ ಮಾಡಿಟ್ಟಿದೆ. ಪಂ ನೆಹರೂ ಅವರು ಆರ್ಥಿಕ ಯೋಜನೆಯಲ್ಲಿ ಅಚಲ ವಿಶ್ವಾಸವುಳ್ಳವರು ಅವರು ತಡಮಾಡದೆ ಯೋಜನೆಗಳನ್ನು ಕೈಕೊಂಡು ಅಪಾಯಕರ ಮಾರ್ಗ ಹಿಡಿದಿರುವ ನಮ್ಮ ಆರ್ಥಿಕ ಪ್ರವಾಹವನ್ನು ಅಂಕೆಗೆ ತರುವರೆಂದು ಹಾರೈಸೋಣ.

ಆದರೆ ಕಾರ್ಯ ಕಠಿನವಾದುದು, ತೊಡಕುಗಳು ಹಲವು—ಅವು ಪೂರ್ಣ ನಮ್ಮ ಹವಿನೊಳಗಿನವು ಕೂಡ ಅಲ್ಲ. ಇಂಥ ಸ್ಥಿತಿಯಲ್ಲಿ ನಾವು ಸರಕಾರದಿಂದ ಒಡನೆ ಕ್ರಾಂತಿಕಾರಕ ಸ್ಥಿತ್ಯಂತರವನ್ನು ನಿರೀಕ್ಷಿಸದೆ ಅರಿತು ಬೆಂಬಲವಿತ್ತು ಸರಕಾರದ ಶಕ್ತಿಯನ್ನು ಹೆಚ್ಚಿಸಬೇಕು.

---

## ಬೆಂಕಿಪೆಟ್ಟಿಗೆಯ ಬರಗಾಲ

(ಎರಡನೆ ಪುಟದಿಂದ ಬಂದುದು)

ಕ— ಮಡಿ ಚುಟ್ಟಾ ಅರಿಹಚ್ಚಲಿ ಅಂತ ಹೇಳೋದು.

ಶಾ:— ಮಡಿ ಚುಟ್ಟಾದಾಗ ಎಂಥಾ ಮಡಿ ಮೈಲಿಗಿ.

ಕ:— ಛೀ: ಉಡದಾರಾ ಕಗದ ಚುಟ್ಟಾ ಮಡಿ.

ಶಾ:— ಮಂತ್ರಾ ಹಾಕಿದ ಜನಿವಾರ, ಏಕಾದಶಿ ಉಪವಾಸಕ್ಕ ಬರೊ ಶಕ್ತಿ, ಮಡಿ ಚುಟ್ಟಾ ಛಲೊ ಛಲೊ ವಸ್ತು ಸ್ಯಾಟ್ಯಾಗ ಮಾರಲಿಕ್ಕೆ ಬರಲಿಕ್ಕೆ ಹತ್ತಿದವು!!



ಕರ್ಮವೀರ
# ಹರಿಜನ ಪುರವಣಿ

## ಚರಖಾ ಜಯಂತಿ

ಚರಖಾ ಜಯಂತಿಯೆಂದು ಕರೆಯಲ್ಪಡುವ ದಿನವು ನನ್ನ ಜಯಂತಿಯ ದಿನವೇ ಯಾವಾಗಲೂ ಬರುವದಾದರೂ ಅದು ಗಾಂಧೀ ಜಯಂತಿಯಲ್ಲ. ಕಾರಣವು ಸ್ಪಷ್ಟವಿದೆ. ಪ್ರಾಚೀನ ಕಾಲದಲ್ಲಿ ಚರಖಾಕ್ಕೂ ಸ್ವಾತಂತ್ರ್ಯಕ್ಕೂ ಏನೂ ಸಂಬಂಧವಿರಲಿಲ್ಲ. ಏನಾದರೂ ಇದ್ದರೆ ದಾಸ್ಯದ ಹಿನ್ನೆಲೆ ಅದಕ್ಕಿದ್ದಿತು. ಒಣಗಿದ ರೊಟ್ಟಿ ತುಣಕಿಗಾಗಿ ಬಡ ಹೆಣ್ಣುಮಕ್ಕಳು ನೂಲಲೇ ಬೇಕಾಗುತಿತ್ತು. ಆಗಿನ ಸರಕಾರದವರು ಮನಸಿಗೆ ಬಂದಷ್ಟು ಕವಡಿಗಳನ್ನು ಅವರೆಡೆಗೆ ಎಸೆಯುತಿದ್ದರು. ರಾಜಕೋಟದ ಹಿಂದಿನ ರಾಜಾಸಾಹೇಬರು ಯಾವುದೊ ಒಂದು ದಿವಸ ಬಡಜನರೆಡೆಗೆ ರೊಕ್ಕ ಚೆಲ್ಲುತಿದ್ದರೆಂಬುದನ್ನು ಬಾಲ್ಯದಲ್ಲಿ ನಾನು ನೋಡಿದ್ದು ಇದೀಗ ಸ್ಮರಣೆಗೆ ಬರುತಿದೆ. ಆಗ ನನಗೆ ಅದೊಂದು ಬಗೆಯ ಮೋಜೆನಿಸುತಿತ್ತು. ಹಿಂದಿನ ಕಾಲದಲ್ಲಿ ಒಡ ನೂಲುವವರು ತಮ್ಮೆಡೆಗೆ ಚಲ್ಲಲ್ಪಡುತಿದ್ದ ಕೆಲವೆ ಕವಡಿಗಳನ್ನು ಹೇಗೆ ಆತುರತೆಯಿಂದ ಆರಿಸಿಕೊಳ್ಳುತಿದ್ದರೆಂಬುದರ ಕಲ್ಪನಾಚಿತ್ರವನ್ನು ನಾನು ರೇಖಿಸಿಕೊಳ್ಳಬಲ್ಲೆನು.

ಬಡತನದಿಂದ ಬಳಲುತಿರುವ ಹಿಂದುಸ್ಥಾನ ಪರಕೀಯ ದಾಸ್ಯದಿಂದ ಮುಕ್ತವಾಗಬೇಕಾದರೆ ಕೈನೂಲು ಮತ್ತು ಚರಖಾ ದಾಸ್ಯದ ಚಿನ್ಹವಾಗಿರದೆ ಸ್ವಾತಂತ್ರ್ಯದ ಚಿನ್ಹವಾಗಿದೆಂಬುದನ್ನು ಅದು ಕಲಿಯಲಿಕ್ಕೆಬೇಕೆಂದು ೧೯೦೮ರಲ್ಲಿ ದಕ್ಷಿಣಆಫ್ರಿಕೆಯಲ್ಲಿ ನನಗೆಹೊಳೆಯಿತು. ರೊಟ್ಟಿಯಮೇಲೆಬೆಣ್ಣೆಯಂತೆ ಅದು ಎಂದೂ ಅದರ ಅರ್ಥ. ಈ ಸತ್ಯವನ್ನು ಶ್ರೀ ನಾರಾಯಣದಾಸ ಗಾಂಧಿಯವರು ಬೇಗ ತಿಳಿದುಕೊಂಡರು. ಅಂತೆಯೆ ಚರಖಾ ಜಯಂತಿಯ ನಿಜ ಮಹತ್ವ ಅವರ ಮನವರಿಕೆಯಾಯಿತು. ಚರಖಾ ಜಯಂತಿಯ ತಾರೀಖಿಗೂ ನನ್ನ ಜನ್ಮತಿಥಿಗೂ ತಳಕುಹಾಕುವ ವರೆಗೆ ನನ್ನ ಜನ್ಮತಿಥಿಯನ್ನೆಂದೂ ಆಚರಿಸುತಿರಲಿಲ್ಲೆಂದು ನನ್ನ ನೆನವರಿಕೆ. ದಕ್ಷಿಣ ಆಫ್ರಿಕೆಯಲ್ಲಿ ನನ್ನನ್ನು ಬಲ್ಲವರು ಅನೇಕರಿದ್ದರೂ ಯಾರೂ ಈ ಜನ್ಮತಿಥಿಯನ್ನು ಲಕ್ಷಿಸಲಿಲ್ಲ. ಇಲ್ಲಿ ಮಾತ್ರ ಚರಖಾ ಜಯಂತಿಗೂ ಜನ್ಮತಿಥಿಗೂ ತ ಳ ಕು ಹಾ ಕ ಲಾ ಯಿ ತು. ಇದರಲ್ಲಿ ನಾರಾಯಣದಾಸ ಗಾಂಧಿಯವರು ಪ್ರಮುಖ ಪಾತ್ರ ವಹಿಸಿರುವರು. ಈ ವಾಕ್ಯಗಳನ್ನು ಬರೆಯುತಿರುವಾಗಲೆ ಉತ್ಸವ ದಿನಗಳು ನನ್ನ ಸ್ಮರಣೆಗೆ ಬರುವವು. ಸ್ವಾತಂತ್ರ್ಯದ ಮತ್ತು ಅಹಿಂಸೆಯ ಪ್ರತೀಕವಾದ ಚರಖದ ಗುಂಯಿಗುಂಯಿ ನಾದವು ಪ್ರತಿಯೊಂದು ಮನೆಯಲ್ಲಿ ಕೇಳಿದಾಗಲೆ ನಿಜವಾದ ಉತ್ಸವ ಮಾಡಿದಂತಾಗುವುದೆಂದು ನನ್ನ ಅಭಿಪ್ರಾಯ. ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿ ಹಲವು ಬಡ ಹೆಣ್ಣುಮಕ್ಕಳು ಅಷ್ಟೇ ಏಕೆ ಕೋಟಿ ಹೆಣ್ಣುಮಕ್ಕಳು ನೂಲಹತ್ತಿದರೂ ಅವರಿಗೆ ಈ ಉತ್ಸವದ ರಹಸ್ಯವೇನು ಗೊತ್ತಾಗಬೇಕು? ಅದರಿಂದ ಯಾವ ಪುರುಷಾರ್ಥ ಸಾಧಿಸಿದಂತಾಗುವದು? ನಿರಂಕುಶ ಆಡಳಿತದಲ್ಲಿಯೂ ಇದು ಸಾಧ್ಯವಾಗಬಹುದು. ಬಂಡವಲುಗಾರಿಕೆಯ ಪ್ರಭುತ್ವವಿದ್ದಲ್ಲೆಲ್ಲ ಇಂದು ಅದು ಕಾಣಿಸಿಕೊಳ್ಳುತಿದೆ. ಬಡವರಿಗೆ ಕೊಡುತಿರುವ ದಾನಧರ್ಮದಿಂದ-ಕೂಲೀ ರೂಪವಾಗಿಯೂ ಅದು ಇದ್ದಿರಬಹುದು— ಕೋಟ್ಯಾಧೀಶರು ಸಹ್ಯರಾಗಿರುವರು.

ಪರಮಾತ್ಮನ ದೃಷ್ಟಿಯಲ್ಲಿ ಎಲ್ಲರೂ ಸಮಾನರು, ಪ್ರತಿಯೊಬ್ಬ ತನ್ನ ದರ್ಜೆಯಲ್ಲಿಯೆ ಸ್ವಂತ ಪರಿಶ್ರಮದಿಂದ ತನ್ನ ಉಪಜೀವನ ಸಾಗಿಸಬೇಕು ಎಂಬುದು ಬಡವರಿಗೆ, ಬಲ್ಲಿದರಿಗ್ಗೆಮನವರಿಕೆಯಾದಾಗಲೆ ಈ ಉತ್ಸವ ನಿಜವಾಗಿ ಸಾರ್ಥಕವಾಗುವುದು. ಅದೇ ರೀತಿಯಾಗಿ ಮದ್ದುಗುಂಡುಗಳಿಂದಲ್ಲ, ಆದರೆ ಕೈನೂಲಿನ ಕುಕ್ಕಡಿ ರೂಪದಲ್ಲಿಯ ಗುಂಡುಗಳಿಂದ ಅಂದರೆ ಹಿಂಸೆಯಿಂದಲ್ಲ; ಆದರೆ ಅಹಿಂಸೆಯಿಂದ ಸರ್ವರ ಸ್ವಾತಂತ್ರ್ಯ ರಕ್ಷಿಸಲಾಗುತಿದೆಂಬುದು ಬಡವರಿಗೆ ಮತ್ತು ಶ್ರೀಮಂತರಿಗೆ ಗೊತ್ತಾದಾಗಲೆ ಈ ಉತ್ಸವ ಸಾರ್ಥಕವಾಗುವುದು.

ಇಂದಿನ ಜಗತ್ತಿನಲ್ಲಿಯ ವಾತಾವರಣವನ್ನು ವಿಚಾರಿಸಿದರೆ ಇದು ಹಾಸ್ಯಾಸ್ಪದವೆನಿಸಬಹುದು. ಆದರೆ ಅಂತರ್ಮುಖಿಗಳಾಗಿ ನಾವು ವಿಚಾರಿಸಿದರೆ ಇದೇ ಸತ್ಯ, ಶಾಶ್ವತ ಸತ್ಯವಾಗಿದೆ. ಸದ್ಯದಲ್ಲಿ ನಾರಾಯಣದಾಸ ಗಾಂಧಿ ಮತ್ತು ಇತರ ರಾಟೀಭಕ್ತರು ವಿಶ್ವಾಸದಿಂದ ಅದನ್ನು ಪ್ರದರ್ಶಿಸಲು ಪ್ರಯತ್ನಿಸುತಿರುವರು. ಈ ನಿಷ್ಠ ಕಾರ್ಯಕರ್ತರು ಯಾವ ಭಾವನೆಯಿಂದ ಪ್ರೇರಿತರಾಗಿ ಈ ಜಯಂತಿಯನ್ನಾಚರಿಸುತ್ತಿರುವರೆಂಬುದನ್ನು ಪ್ರತಿಯೊಬ್ಬರು ತಿಳಿದುಕೊಂಡು ಅದನ್ನು ಆಚರಿಸಲಿ.

[ಹರಿಜನ ಬಂಧುವಿನಿಂದ]

ಹೊಸದಿಲ್ಲಿ — ಮೋ. ಕ. ಗಾಂಧಿ
೧೪—೯—೧೯೪೬

## ಸುದ್ದಿಗಾರರಿಗೆ ಸೂಚನೆ

ನಡುಗಾಲ ಸರಕಾರದಲ್ಲಿ ತಮಗೆ ಸ್ಥಳಕೊಡಿಸಬೇಕೆಂದು ಹಲವರು, ಬೇರೆ ಬೇರೆ ಸ್ಥಳಗಳಲ್ಲಿಯ ಸಂಪುಗಳ ಸಂಬಂಧದಲ್ಲಿ ಕೆಲವರು, ಇನ್ನುಳಿದವರು ಉಪವಾಸದ ಬಗ್ಗೆ ಹೀಗೆ ಹಲವು ಸಂಘಾವಿತ ಜನರು ನನಗೆ ತಂತಿಗಳನ್ನು ಕಳಿಸುವಲ್ಲಿ ಹಣವನ್ನು ಹಾಳು ಮಾಡುತ್ತಾರೆ. ಇವರೆಲ್ಲ ಅನವಶ್ಯಕ ತೊಂದರೆ ತೆಗೆದುಕೊಳ್ಳುವರಲ್ಲದೆ ಹಣವನ್ನೂ ಹಾಳು ಮಾಡುವರೆಂದು ನಾನು ಹೇಳಬಯಸುತ್ತೇನೆ. ಆದರೆ ಅವರು ನನ್ನಿಂದ ಯಾವದೇ ಬಗೆಯ ಸಹಾಯವನ್ನು ಪಡೆಯದೆ ಮೊದಲೆ ಶಕ್ತಿಮೀರಿ ಕೆಲಸ ಮಾಡುತ್ತಿರುವ ಸಹಕಾರಿಗಳಿಗೆ ಮತ್ತು ಸಹಾಯಕರಿಗೆ ಕೆಲಸದ ಹೊರೆಯನ್ನು ಹೆಚ್ಚಿಸುತ್ತಿರುವರು. ಸಹಕಾರಿ ಮಂತ್ರಿಗಳ ಐಕ್ಯದಲ್ಲಿ ರಾಷ್ಟ್ರೀಯ ಸರಕಾರದ ಸದಸ್ಯರ ಮೇಲೆ ನನ್ನ ವರ್ಚಸ್ಸು ಉಪಯೋಗಿಸಬೇಕೆಂದು ನನ್ನ ಇಚ್ಛೆಯಿಲ್ಲ, ಹಾಗೆ ಮಾಡುವದು ನನಗಾಗಲಿ ಇತರ ಯಾರಿಗೆ ಆಗಲಿ ಸರಿಯಲ್ಲೆಂದು ನನ್ನ ಅಭಿಪ್ರಾಯ. ಕಾರ್ಯಕ್ಷಮತೆಯಿಂದ ಮತ್ತು ಪ್ರಾಮಾಣಿಕ ರೀತಿಯಿಂದ ರಾಷ್ಟ್ರೀಯ ಸೇವೆ ಅವರು ಮಾಡಬೇಕಿದ್ದರೆ ಸಹಕಾರಿಗಳ ಐಕ್ಯದಲ್ಲಿ ಯಾರೂ ಕೈಹಾಕತಕ್ಕದ್ದಲ್ಲ. ಸಂಪು ಮತ್ತು ಉಪವಾಸಗಳ ಸಂಬಂಧದಲ್ಲಿ ನನ್ನ ಅಭಿಪ್ರಾಯ ಸರ್ವಶ್ರುತ. ಪ್ರಸಂಗದಲ್ಲೆಲ್ಲ ಇವು ಸಾಕಷ್ಟು ಸಹಾಯಕವಾಗಬಲ್ಲುವು. ಅಪೂರ್ಣ ಮತ್ತು ಏಕಪಕ್ಷೀಯ ಸಂಗತಿಗಳ ಮೇಲೆ ನನ್ನ ಅಭಿಪ್ರಾಯ ಕೊಡುವದು ಅಶಕ್ಯ ಮತ್ತು ಅನುಚಿತ. ಪ್ರತಿಯೊಂದು ಸಂಗತಿಯನ್ನೆಲ್ಲ ಅಭ್ಯಸಿಸಲು ನನಗೆ ಸಮಯವಿಲ್ಲ. ನನ್ನಲ್ಲಿ ಕೇವಲ ಮರ್ಯಾದಿತ ಶಕ್ತಿಯಿದೆ. ಈಗ ಅದನ್ನೆಲ್ಲ ಸಂಪೂರ್ಣ ಉಪಯೋಗಿಸುತಿರುವೆ, ಹೆಚ್ಚಿನ ಹೊರೆ ಹೊರಲಾರೆ ಎಂದು ನಾನು ಲೇಖಕರಿಗೆ ಆಶ್ವಾಸಿಸಬಯಸುತ್ತೇನೆ.

ಹೊಸದಿಲ್ಲಿ — ಮೋ. ಕ. ಗಾಂಧಿ
೧೫-೯-೪೬

## ಸತ್ಯಾಗ್ರಹ ಸಾಕಾಯಿತು ?

ಸತ್ಯಾಗ್ರಹದಲ್ಲಿ ವಿಶ್ವಾಸ ಕಳೆದುಕೊಂಡ ಹಿಂದೀಯರ ಹೊಸದೊಂದು ಗುಂಪು ದಕ್ಷಿಣ ಆಫ್ರಿಕೆಯಲ್ಲಿ ತಲೆಯೆತ್ತಿದೆಂದು ದರ್ಬಾನದಿಂದ ಸುದ್ದಿ ಬಂದಿದೆ. ನೀಗ್ರೋಗಳನ್ನು ಬಿಳಿಯರಲ್ಲದವರನ್ನು ಏಶಿಯ ಮತ್ತು ಯುರೋಪಿನ ಸಹಾನುಭೂತಿಗರನ್ನು ಕೂಡಿಕೊಂಡು ಹಿಂಸಾಮಾರ್ಗದಿಂದಲೆ ಬಿಳಿಯರ ಆಡಳಿತೆಯನ್ನು ಅಳಿಯಬಲ್ಲೆವೆಂಬ ಕನಸನ್ನು ಅವರು ಕಾಣುತಿರುವರು. ಈ ಸುದ್ದಿಯಲ್ಲಿ ಏನಾದರೂ ತಥ್ಯವಿದ್ದರೆ ನಿಜವಾಗಿಯೂ ಮನನೋಯುವಂಥದು, ಮತ್ತು ತುತ್ತಿನಲ್ಲಿ ನೋಣಬಂದಂತೆಯೆ ಎಂಬುದು ನಿಶ್ಚಿತ. ದಕ್ಷಿಣ ಆಫ್ರಿಕೆಯಲ್ಲಿ ಹಿಂದೀಯರು ಕೆಲವೇ ಜನರಿದ್ದರೂ ಕಷ್ಟ ಸಹಿಸುವ ಅತುಲ ಶಕ್ತಿಯನ್ನು ಪ್ರದರ್ಶಿಸಿದರು. ತಾಳಗೆಟ್ಟು ವಿಧ್ವಂಸಕ ಮತ್ತು ವಿನಾಶಕ ವೃತ್ತಿಗೆಳಸದೆ, ಇಡೀ ಜಗತ್ತಿನ ಮನ್ನಣೆಗೆ ಪಾತ್ರರಾಗಿರುವರೆಂಬುದನ್ನು ಅಹಿಂಸೆಯಲ್ಲಿ ವಿಶ್ವಾಸವಿದ್ದವರು ಇಲ್ಲದಿದ್ದವರು ಎಲ್ಲರೂ ತಿಳಿದುಕೊಳ್ಳತಕ್ಕದ್ದು. ಕಷ್ಟ ಸಹಿಷ್ಣುತೆಯಿಂದಲೆ ನಿಜವಾದ ಕಲ್ಯಾಣವಾಗುವದೆಂಬ ಹಾಗು ಐಕ್ಯದಲ್ಲಿಯೆ ವಿಜಯವೆಂಬ ಪಥ್ಯ ಪಾಠವನ್ನು ಅವರು ಕಲಿತರು. ಅನುಪಮ ಸತ್ಯಾಗ್ರಹಾಸ್ತ್ರವನ್ನು ಬೀಸಾಡುವ ಮೋಹಕ್ಕೆ ಯಾವ ಕಾರಣದಿಂದಲೂ ಬಲಿಬೀಳಬಾರದೆಂದು ದಕ್ಷಿಣ ಆಫ್ರಿಕೆಯಲ್ಲಿ ಹಿಂದೀಯರಿಗೆ ಅನುಭವಪೂರ್ಣವಾದ ದೃಢವಾದ ಸಲಹೆ ಕೊಡಬಯಸುತ್ತೇನೆ. ಶ್ವೇತೇತರರ, ನೀಗ್ರೋಗಳ ಮತ್ತು ಉಳಿದ ಸಹಾನುಭೂತಿಗಾರರ ಸಹಾಯವನ್ನು ಪಡೆಯಬಾರದೆಂದು ಇದರ ಅರ್ಥವಲ್ಲ. ಅಲ್ಲದೆ ಪ್ರಸಂಗದಲ್ಲಿ ಅವರಿಗೆ ಅವಶ್ಯಕ ಸಹಾಯ ಸಲ್ಲಿಸಬಾರದೆಂದೂ ಇದರ ಅರ್ಥವಲ್ಲ. ಸತ್ಯಾಗ್ರಹವೇ ಅವರ ಏಕಮಾತ್ರ ಅಸ್ತ್ರವಾಗಿರತಕ್ಕದ್ದೆಂಬುದೊಂದೇ ಕರಾರು. ಅಹಿಂಸಾ ಮಾರ್ಗದಿಂದ ಅವರು ಚ್ಯುತರಾದರೆ ಹಿಂದೀ ಸಾಮ್ರಾಜ್ಯದಲ್ಲಿಯ ಅರಸನನ್ನು ಕಂಡು 'ಮನುಷನನ್ನು ಮರೆತ' ಹಿಂದೀ ಹೆಣ್ಣುಮಗಳಂತೆ ಅವರ ಹಣೆಯಬರಹವಾಗುವದು.

ಹೊಸದಿಲ್ಲಿ — ಮೋ. ಕ. ಗಾಂಧಿ.
೧೧-೯-೪೬ (ಹರಿಜನ ಬಂಧುವಿನಿಂದ)

## ಹೇಡಿತನವಲ್ಲವೇ ಇದು ?

ಪ್ರಶ್ನೆ:— ನಿಮ್ಮ ಅಭಿಪ್ರಾಯದಂತೆ ಅಹಿಂಸೆ ಹೇಡಿತನವಲ್ಲ. ಆದರೆ ಅನ್ಯಾಯದ ವಿರುದ್ಧ ಅದೊಂದು ಬಗೆಯ ಪ್ರತೀಕಾರ. ಸನಿನಯ ಕಾಯಿದೆಭಂಗ ಮಾಡುವಂಥ ಅನಪರಾಧಿ ಜನರನ್ನು ಸೆರೆ ಹಿಡಿದು ಜೇಲಿಗಟ್ಟುವುದು ತಪ್ಪೆಂದು ನೀವು ಒಪ್ಪಿರುವಿರಿ. ಮತ್ತು ನೀವು ಸಂತೋಷದಿಂದ ಬಂಧನವನ್ನು ಬರಮಾಡಿಕೊಂಡು ಕಾರಾಗೃಹಕ್ಕೆ ಹೋಗುತ್ತಿರುವಿರಿ. ಇದು ವಿಸಂಗತ ಮತ್ತು ಹೇಡಿತನವಲ್ಲವೇ?

ಉತ್ತರ:— ಅಹಿಂಸೆಯ ಕಾರ್ಯಕ್ಷಮತೆಯೇ ನಿಮಗೆ ಗೊತ್ತಿಲ್ಲೆಂಬುದು ಸ್ಪಷ್ಟವಾಗಿದೆ. ಅನ್ಯಾಯದ ಕಾಯಿದೆಯೆಂದರೆ ಹಿಂಸೆಯ ಒಂದು ಬಗೆ. ಅದನ್ನು ಮುರಿದದ್ದಕ್ಕಾಗಿ ಬಂಧನವೂ ಅದೇ ಬಗೆಯದು. ಅದಕ್ಕಿಂತ ಒಂದು ಕೈ ಮೇಲೆ. ಹಿಂಸೆಯನ್ನು ಪ್ರತಿಹಿಂಸೆಯಿಂದ ಎದುರಿಸಬಾರದು. ಆದರೆ ಅಹಿಂಸೆಯಿಂದ ಎಂದು ಅಹಿಂಸಾ ಶಾಸ್ತ್ರ ಪ್ರತಿಪಾದಿಸುತಿದೆ. ಯಾವದೆ ಕಾಯಿದೆ ಮುರಿದರೆ ಶಾಸನಕ್ಕೆ ಪಾತ್ರನಾಗುವನು. ನಾನು ಹೇಳುವದೆಂದ ಮಾತ್ರಕ್ಕೆ ಅದು ಅನ್ಯಾಯವಾಗದು. ಆದರೂ ನನ್ನ ಅಭಿಪ್ರಾಯದಂತೆ ಅದು ಅನ್ಯಾಯ. ಕಾಯಿದೆ ಪುಸ್ತಕದಲ್ಲಿ ಅದು ಇರುವ ವರೆಗೆ ಅದನ್ನು ಜಾರಿಯಲ್ಲಿ ತರುವದು ಸರಕಾರದ ಅಧಿಕಾರ. ಅದನ್ನು ನಾನು ಅಹಿಂಸಾತ್ಮಕವಾಗಿಯೆ ಪ್ರತೀಕರಿಸಲಿಕ್ಕೆ ಬೇಕು. ಕಾಯಿದೆಯನ್ನು ಮುರಿದು ಶಾಂತ ರೀತಿಯಿಂದ ಬಂಧನಕ್ಕೊಳಗಾಗಿ ಸೆರೆಮನೆಗೆ ಹೋಗಿ ನಾನಿದನ್ನು ಮಾಡುತ್ತೇನೆ. ಈ ಬಗೆಯ ವರ್ತನೆ ಶೌರ್ಯದ—ಅವಶ್ಯವಿದ್ದ ಮಟ್ಟಿಗೆ—ಕೃತಿಯೆಂದು ನಾನು ಹೇಳಬಯಸುತ್ತೇನೆ. ಕಾರಾಗೃಹವಾಸದಿಂದ ನನ್ನ ಮಾನಸಿಕ ಪರಿಸ್ಥಿತಿಯ ಮೇಲೆ ಯಾವದೇ ಬಗೆಯ ಅಂತರವಾಗುವದಿಲ್ಲ ಎಂದು ಗ್ರಹಿಸಿದ್ದಾದರೆ ನನ್ನಂಥ ಮನುಷ್ಯರಿಗೆ ಇಂದು ಕಾರಾಗೃಹವಾಸದಿಂದ ಕಷ್ಟವಾಗುವದಿಲ್ಲೆಂದು ಹೇಳುವದು ಅಪ್ರಾಸಂಗಿಕ. ಅಂತೆಯೆ ಸದ್ಯದ ಸಂದರ್ಭದಲ್ಲಿ ಪ್ರತೀಕಾರವಾದನಿರುವದು ಅಹಿಂಸೆಯ ಮುಖ್ಯ ಕರಾರು. ಇದು ಹೇಡಿತನದ ಲಕ್ಷಣವಲ್ಲ. ತದ್ವಿರುದ್ಧವಾಗಿ ಬಂಧಿಸುವಾಗ ಪ್ರತೀಕಾರ ಮುಂತಾದ್ದನ್ನು ಮಾಡುವದು ಹುಚಿತವಾಗಿ ಬಾಯಿಬಡಾಯಿ. ವಿಚಾರಹೀನ ಹಿಂಸೆಯಾಗಿ ಬಿಣ ಜಂಭವೆಂದು ಕರೆಯಿಸಿಕೊಳ್ಳಲ್ಪಡುವದು.

ಹೊಸದಿಲ್ಲಿ — ಮೋ. ಕ. ಗಾಂಧಿ
೧೪—೯—೪೬

## ಸಾಮೂಹಿಕ ಪ್ರಾರ್ಥನೆ

ಪ್ರಶ್ನೆ:— ಸಾಮೂಹಿಕ ಪ್ರಾರ್ಥನೆಯಲ್ಲಿ ನಿಮಗೆ ವಿಶ್ವಾಸ. ಇಂದಿನಂತೆ ಏಕತ್ರ ಕೂಡಿ ಪೂಜಿಸುವದು ನಿಜವಾದ ಪ್ರಾರ್ಥನೆಯೆ? ನನ್ನ ಅಭಿಪ್ರಾಯದಂತೆ ಇದು ಅಧಃಪಾತದ ಸಂಗತಿ. ಅಂತೆಯೆ ಘಾತಕವಾದುದು. ಜೀಸಸನು ಹೇಳಿದನು "ಪ್ರಾರ್ಥಿಸುವಾಗ ನೀನು ವಂಚಕನಾಗಬೇಡ, ನಿನ್ನ ಅಂತರಾತ್ಮನ ಸಾಕ್ಷಾತ್ಕಾರ ಮಾಡಿಕೊಂಡು ರಹಸ್ಯದಲ್ಲಿ ತಂದೆಯನ್ನು ಕುರಿತು ಪ್ರಾರ್ಥಿಸು." ಸಮ್ಮರ್ಗದಲ್ಲಿ ಅನೇಕ ಜನರು ಏಕಚಿತ್ತರಾಗದಂತಹ ಪರಿಸ್ಥಿತಿಯಲ್ಲಿರುವಾಗ ಮಾಡಿದ ಪ್ರಾರ್ಥನೆ ಮೋಸವಾಗಿರುತದು. ಯೋಗಿಯು ಇದನ್ನು ಬಲ್ಲನು. ಆದುದರಿಂದ

— ೧೦ನೇ ಪುಟ ನೋಡಿರಿ

# ಮಾಡಬೇಕೇನು?

ಗೆಳೆಯರೊಬ್ಬರು ಕೆಳಗಿನ ಪ್ರಶ್ನೆಗಳನ್ನು ಕೇಳಿದ್ದಾರೆ—

ಪ್ರ:— ೧ ಪುಂಡರು ಇಲ್ಲವೆ ಬೇರೆಯವರು ದಾಳಿ ಮಾಡಿದಾಗಲೂ ಜನರು ಆತ್ಯಂತಿಕ ಅಹಿಂಸೆಯನ್ನು ಪಾಲಿಸತಕ್ಕದ್ದೆಂದು ನೀವು ಎಂದಿನಿಂದಲೂ ಅಭಿಪ್ರಾಯ ಪಡುತಿದ್ದು ಅದನ್ನು ಪ್ರಚಾರಪಡಿಸಿರುವಿರಿ. ಹೆಣ್ಣುಮಕ್ಕಳ ಮೇಲೆ ದಾಳಿ ಇಲ್ಲವೆ ಅತ್ಯಾಚಾರವಾದಾಗಲೂ ಇದೇ ಮಾರ್ಗವನ್ನನುಸರಿಸಬೇಕೋ? ಅಹಿಂಸೆಯ ಸಂಬಂಧದಲ್ಲಿ ಜನರು ನಿಮ್ಮ ಮಾರ್ಗವನ್ನನುಸರಿಸಲು ಅಸಮರ್ಥರಾದರೆ ಹೇಡಿಗಳಂತೆ ಸಾಯಲು ನೀವವರಿಗೆ ಸಲಹೆ ಕೊಡುವಿರೊ ಇಲ್ಲವೆ ಹಿಂಸಾತ್ಮಕ ಪ್ರತೀಕಾರದಿಂದ ದಾಳಿಯನ್ನೆದುರಿಸಬೇಕೆಂದು ಹೇಳುವಿರೊ?

ಪ್ರ:— ೨ ಮುಸ್ಲಿಂ ಲೀಗು ಇಂದು ಇಬ್ಬಗೆಯ ಆಟವನ್ನು ಆಡುವದು ಅದನ್ನು ನೀವು ತೀವ್ರವಾಗಿ ಖಂಡಿಸುವದಿಲ್ಲವೊ? ಅವರ ಧುರೀಣರು ಹಿಂದುಗಳ ವಿರುದ್ಧ ಪ್ರತ್ಯಕ್ಷ ಹಿಂಸೆ ಮತ್ತು ಜೋಹಾದವನ್ನು ಪ್ರಚಾರಮಾಡುತಿರುವಾಗಲೆ ಅವರು ಮಂತ್ರಿಪದದಲ್ಲಿದ್ದುಕೊಂಡು ಪೋಲೀಸು ಮತ್ತು ನ್ಯಾಯಸ್ಥಾನದ ಎಲ್ಲ ಸೂತ್ರಗಳನ್ನು ನಡೆಸುತ್ತಿರುವರು.

ಪ್ರ:— ೩ ಇತಿಹಾಸದಲ್ಲಿಯೇ ಅಪೂರ್ವವಾದ ಇಂಥ ಅಕ್ರಮವನ್ನು ತಡೆಯಲಿಕ್ಕೆ ಹಿಂದುಸ್ಥಾನದಲ್ಲಿ ಯಾವದೊಂದು ಸತ್ತೆ ಇರುವದಿಲ್ಲವೆ?

ಪ್ರ:— ೪ ಸದ್ಯದಂಥ ಘಟನೆಗಳನ್ನು ಹಾಗೆಯೆ ನಡೆಯಗೊಟ್ಟರೆ ಯಾದವೀ ಯುದ್ಧವೇ ಅಪರಿಹಾರ್ಯವೆಂದು ನಿಮಗೆನಿಸುವದಿಲ್ಲವೆ? ಇಂಥ ಭೀಕರ ಪ್ರಸಂಗ ಬಂದರೆ ಅದನ್ನು ಎದುರಿಸಲು ನಿಮ್ಮ ದೇಶಬಾಂಧವರಿಗೆ ಎಂತು ಸಲಹೆ ಕೊಡುವಿರಿ?

ಉ:— ೧ ನನ್ನ ಕಲ್ಪನಾಸಮಾಜದಲ್ಲಿ ಈ ಪ್ರಶ್ನೆಗಾರರು ಎತ್ತಿ ತೋರಿಸುವಂಥ ಅತ್ಯಾಚಾರಗಳು ಸಂಭವಿಸುವದೇ ಇಲ್ಲ. ಆದರೆ ನಾವೀಗ ಇರುವ ಸಮಾಜದಲ್ಲಿ ಇಂಥ ಅತ್ಯಾಚಾರಗಳು ಸಂಭವಿಸುವದುಂಟು. ನನ್ನ ಉತ್ತರ ಸುಸ್ಪಷ್ಟವಾಗಿದೆ. ಅಹಿಂಸಾನಿಷ್ಠ ಸ್ತ್ರೀ-ಪುರುಷರು ಪ್ರತಿಕಾರ ಮಾಡದೆ ಮರಣ ಹೊಂದಬೇಕು. ಸಿಟ್ಟು ಇಲ್ಲವೆ ದ್ವೇಷಭಾವನೆ ತಳೆಯತಕ್ಕದ್ದಲ್ಲ. ಆತ್ಮರಕ್ಷಣೆಯಲ್ಲಿಯೂ ಹೆಣ್ಣುಮಕ್ಕಳ ಮಾನರಕ್ಷಣೆಯಲ್ಲಿಯೂ ಇದೇ ಮಾತು ಸರಿ ಹೋಗುವದು. ಶೌರ್ಯದ ಅತ್ಯುಚ್ಚ ಆದರ್ಶವಿದು. ನನ್ನ ಧುರೀಣತ್ವವೆಂದು ತಪ್ಪಾಗಿ ಕರೆಯುತಿರುವ ಈ ಮಹಾಕಾಯದೆಯಂತೆ ನಡೆಯಲು ಯಾವದೊಂದು ವ್ಯಕ್ತಿ ಇಲ್ಲವೆ ಜನರ ಗುಂಪು ಅಸಮರ್ಥವಾದರೆ ಇಲ್ಲವೆ ಇಷ್ಟಪಡದಿದ್ದರೆ ಪ್ರತೀಕಾರ, ಅಮರಣ ಪ್ರತೀಕಾರ ಎರಡನೆಯ ದರ್ಜೆಯ ಮಾರ್ಗ. ಮೊದಲನೆಯದಕ್ಕಿಂತ ಇದು ಬಹಳ ಭಿನ್ನವಾಗಿದೆ. ಹೇಡಿತನವು ಹಿಂಸೆಗಿಂತ ಕನಿಷ್ಠವಾದ ಅಧಮತನವು. ಹೇಡಿಯು ಸೇಡು ತೆಗೆದುಕೊಳ್ಳಬಯಸುವನು. ಆದರೆ ಸಾಯುವದಕ್ಕೆ ಅಂಜಿ ಎರಡನೆಯವರ ಸಹಾಯವನ್ನು ಅಪೇಕ್ಷಿಸುವನು. ತನ್ನ ಸಂರಕ್ಷಣೆಯ ಸಲುವಾಗಿ ಆಗಿನ ಸರಕಾರಕ್ಕೂ ಶರಣು ಹೋಗಬಹುದು. ಹೇಡಿಯು ಮಾನವರಿಗಿಂತ ಅಧಮನು. ಸ್ತ್ರೀ—ಪುರುಷ ಸಮಾಜದ ಘಟಕನಾಗಲು ಕೂಡ ಆತನು ಅನರ್ಹನು. ಕೊನೆಯದಾಗಿ ಹೆಣ್ಣುಮಕ್ಕಳು ನನ್ನ ಸಲಹೆಯಂತೆ ನಡೆದಿದ್ದರೆ ಈಗ ನಡೆವರೆ ಅಣ್ಣತಮ್ಮಂದಿರ ಇಲ್ಲವೆ ಅಕ್ಕತಂಗಿಯರ ಸಹಾಯವನ್ನಪೇಕ್ಷಿಸದೆ ಆತ್ಮರಕ್ಷಣೆಮಾಡಿಕೊಳ್ಳಬಲ್ಲರು.

ಉತ್ತರ— ೨. ಇಬ್ಬಗೆಯ ಆಟ ಹೂಡಿದ್ದು ನಿಜವಾಗಿ ತೀರ ಅನುಚಿತ. ನಮ್ಮ ರಾಷ್ಟ್ರೀಯ ಜೀವನದ ಇತಿಹಾಸದಲ್ಲಿ ಅದೊಂದು ವಿಷಾದಮಯ ಪರಿಚ್ಛೇದ. ನನ್ನ ನಿಷೇಧ ಸಾಮೂಹಿಕವಾಗಿ ಅನ್ವಯಿಸುತ್ತದೆ. ಅದು ಬಹಳ ಅನಿಷ್ಟವಿದ್ದುದರಿಂದ ಬಹಳ ದಿನ ಬಾಳಲಾರದು.

ಉತ್ತರ— ೩. ಘಟನಾಬದ್ಧ ಅಧಿಕಾರಿಗಳೆಂದರೆ ಬ್ರಿಟಿಶರೆ. ನಾವೆಲ್ಲ ಅವರ ಕೈಗೊಂಬೆಗಳು. ಆದರೆ ಸತ್ತೆಯನ್ನು ನಿಂದಿಸುವದು ತಪ್ಪು ಮತ್ತು ಮೂರ್ಖತನದ್ದು. ಅದು ತನ್ನ ಸ್ವಭಾವದಂತೆ ವರ್ತಿಸುವದು. ಆದರೀತವೇನು ನಮಗೆ ಕೈಗೊಂಬೆಗಳಾಗಲಿಕ್ಕೆ ಒತ್ತಾಯಪಡಿಸುವದಿಲ್ಲ. ನಾವೇ ಮುಂದಾಗಿ ಅವರ ಶಿಬಿರದಲ್ಲಿ ಹೋಗುವೆವು. ಆದುದರಿಂದ ನಮ್ಮಲ್ಲಿಯ ಪ್ರತಿಯೊಬ್ಬರಿಗೆ ಬ್ರಿಟಿಶರ ಆಟವನ್ನಾಡಲು ನಿರಾಕರಿಸಲು ಮುಕ್ತದ್ವಾರವಿದೆ.

ಬ್ರಿಟಿಶ ಅಧಿಕಾರ ಇಲ್ಲಿಂದ ಕಾಲ್ತೆಗೆಯಲು ಒದ್ದಾಡುತಿದೆಂಬುದನ್ನು ನಾವು ನಿಃಸಂದೇಹವಾಗಿ ಒಪ್ಪಬೇಕು. ಹೇಗೆಂಬುದು ಅದಕ್ಕೆ ತಿಳಿಯದಾಗಿದೆ. ಪ್ರಾಮಾಣಿಕವಾಗಿ ಅದು ಹಿಂದುಸ್ತಾನ ಬಿಡಬಯಸುತ್ತದೆ. ಆದರೆ ಬಿಡುವ ಮೊದಲು ಈ ವರೆಗೆ ಮಾಡುತ್ತ ಬಂದ ತಪ್ಪುಗಳ ಪರಿಮಾರ್ಜನೆ ಮಾಡಲೂ ಇಷ್ಟಪಡುತಿದೆ. ಒಸಿಕೆ ಪೆಟ್ಟು ತಿನ್ನುವವನಿಗೆ ಅದರ ನೋವು ಗೊತ್ತಾಗುವದು. ಹಿಂದುಸ್ತಾನವನ್ನು ಅದರ ಪ್ರಾಪ್ತಿಗೇ ಬಿಟ್ಟುಗೊಟ್ಟು ಹಿಂದೆ ಮಾಡಿದ ತಪ್ಪುಗಳ ಪರಿಮಾರ್ಜನೆ ಮಾಡಿರೆಂದು ನಾನು ಮೊದಲಿನಿಂದ ಬ್ರಿಟಿಶರಿಗೆ ಹೇಳುತ್ತ ಬಂದಿರುವೆನು. ಈ ಸತ್ಯಸಂಗತಿಯು ಬ್ರಿಟಿಶ್ ಅಧಿಕಾರದಲ್ಲಿದ್ದವರಿಗೆ ಹೊಳೆಯಲೊಲ್ಲದು. ನಮಗಿಂತ ಹೆಚ್ಚು ತಮಗೇ ಹಿಂದುಸ್ಥಾನದ ಬಗ್ಗೆ ಗೊತ್ತಿದೆಂದು ಅವರು ಜಂಭ ಕೊಚ್ಚಿಕೊಳ್ಳುವರು. ಶತಮಾನಕ್ಕಿಂತ ಹೆಚ್ಚು ಅವಧಿಯ ವರೆಗೆ ನಮ್ಮನ್ನು ಯಶಸ್ವಿಯಾಗಿ ದಾಸ್ಯದಲ್ಲಿಟ್ಟದ್ದರಿಂದ ನಮ್ಮ ಭವಿತವ್ಯದ ನಿರ್ಣಾಯಕರು ತಾವೇ ಎಂದು ಅವರು ಹೇಳಿಕೊಳ್ಳುತಿರುವರು. ಶಾಂತ ಮಾರ್ಗದಿಂದ ನಾವು ನಮ್ಮದನ್ನು ಗಳಿಸಿಕೊಂಡರೆ ಅವರು ಗುಣಗುಡತಕ್ಕದ್ದಲ್ಲ. ಸತ್ಯಾಗ್ರಹವೆಂದಿಗೂ ಸೇಡುತೀರಿಸಿಕೊಳ್ಳುವ ಮಾರ್ಗವಲ್ಲ. ವಿಧ್ವಂಸನದಲ್ಲಿ ಅದರ ವಿಶ್ವಾಸವಿಲ್ಲ. ಅದರ ಮತಪರಿವರ್ತನದಲ್ಲಿ. ಅದರ ಅಪಯಶಸ್ವಿಗೆ ಸತ್ಯಾಗ್ರಹ ಶಾಸ್ತ್ರದಲ್ಲಿ ದೋಷವಿದೆಂಬುದು ಕಾರಣವಲ್ಲ. ಆದರೆ ಸತ್ಯಾಗ್ರಹಿಯ ಅಶಕ್ತತೆಯೆ ಅದಕ್ಕೆ ಕಾರಣ. (ಕಾರಣವೇನೇ ಇರಲಿ) ಬ್ರಿಟಿಶ್‌ರು ಇಲ್ಲಿಂದ ಕಾಲ್ತೆಗೆಯಲು ನಿರ್ಧರಿಸಿದ್ದರಿಂದ ತನ್ನದೆ ಲೋಪದೋಷಗಳನ್ನು ಹೆಚ್ಚಾಗಿ ಪ್ರದರ್ಶಿಸುತಿರುವದು.

ಮುರಿದ ಗಲಗು ಅದೆಂದು ಪಕ್ಷ ಪಂಗಡಗಳಿಗೆ ಹೆಚ್ಚಾಗಿ ಎನಿಸಹತ್ತಿದೆ. ಹಿಂದು ಮುಸಲ್ಮಾನನಂತೆ ಪಕ್ಷ ಪಂಗಡಗಳೂ ಬಡಿದಾಡಹತ್ತಿದರೆ ಅವರಲ್ಲಿ ಯಾವದೊಂದು ಪಕ್ಷವಾದರೂ ಕೆಳಗಿನ ಮಾತನ್ನು ತಿಳಿದುಕೊಳ್ಳಲಿಕ್ಕೆಬೇಕು.

ಹಿಂದುಸ್ತಾನ ಸ್ವತಂತ್ರ ರಾಷ್ಟ್ರವಾಗಬೇಕಾದರೆ ಸಂರಕ್ಷಣೆಗಾಗಿ ಬ್ರಿಟಿಶ್ ಅಧಿಕಾರವನ್ನವಲಂಬಿಸತಕ್ಕದ್ದಲ್ಲ. ಯಾವದೊಂದು ಪಕ್ಷವು ಇಲ್ಲವೆ ಎರಡೂ ಪಕ್ಷಗಳು ಬ್ರಿಟಿಶ್ ಸತ್ತೆಯನ್ನು ಬೇಕಂತಲೇ ಅವಲಂಬಿಸತಕ್ಕದ್ದಲ್ಲ.

ಉ:—೪ ಇನ್ನು ಕೊನೆಯ ಪ್ರಶ್ನೆ. ಯಾದವೀ ಯುದ್ಧದ ಮಧ್ಯದಲ್ಲಿ ನಾವಿನ್ನೂ ಇರುವದಿಲ್ಲ. ಆದರೆ ನಾವದನ್ನು ಸಮೀಪಿಸುತಿರುವೆವು. ಸದ್ಯಕ್ಕೆ ನಾವು ಅದರೊಡನೆ ಹುಡುಗಾಟವಾಡುತಿರುವೆವು. ಯುದ್ಧವೆಂದರೆ ಸಾಮೂಹಿಕ ಇಲ್ಲವೆ ರಾಷ್ಟ್ರೀಯ ಪ್ರಮಾಣದಲ್ಲಿ ನಡೆದ ಪುಂಡಗಿರಿಯ ಗೌರವದ ಶಬ್ದ. ಬ್ರಿಟಿಶ್‌ರು ಜಾಣರಾಗಿದ್ದರೆ ಅವರು ಅದರಿಂದ ಅಲಿಪ್ತರಾಗುಳಿಯುವರು. ಆದರೆ ಲಕ್ಷಣಗಳು ಮಾತ್ರ ಹಾಗೆ ತೋರುವದಿಲ್ಲ. ೧೯೩೫ ನೇ ಕಾಯಿದೆಯಿಂದ ಇಂಗ್ಲಿಶ್‌ರಿಗೆ ಪ್ರಾಂತಿಕ ಶಾಸನ ಸಭೆಗಳಲ್ಲಿ ಸ್ಥಾನ ಸಿಕ್ಕದ್ದು ಅಧಿಕಾರದಿಂದಲ್ಲ. ಆದರೆ ಬ್ರಿಟಿಶ್‌ರ ಹಿತಸಂಬಂಧಗಳನ್ನು ಅವರು ರಕ್ಷಿಸಬಹುದೆಂದು ಹಿಂದು-ಮುಸಲ್ಮಾನರನ್ನು ಪ್ರತ್ಯೇಕವಾಗಿಡುವದಕ್ಕೆಂದು ಎಂಬುದನ್ನು ತಿಳಿದುಕೊಳ್ಳಬಯಸುವದಿಲ್ಲ. ಇದೊಂದು ಸಣ್ಣ ಮಾತು. ಆದರೆ ಗಾಳಿ ಎತ್ತ ಬೀಸುತಿದೆಂಬುದನ್ನು ಇದು ತೋರಿಸುತ್ತಿದೆ. ಈ ಶಕುನಗಳಿಂದ ಸ್ವರಾಜ್ಯ ಪ್ರೇಮಿಗಳು ಮತ್ತು ನಿರ್ಮಾಪಕರು ಎದೆಗುಂದತಕ್ಕದ್ದಲ್ಲ. ಸತ್ಯಾಗ್ರಹವೇ ಸರ್ವಶ್ರೇಷ್ಠವಾದ ಸಾಧನ. ಸ್ವರಾಜ್ಯಕ್ಕೆ ಇದಕ್ಕೂ ಶ್ರೇಷ್ಠವಾದ ಬೇರೆ ಸಾಧನವಿಲ್ಲ. ಸ್ವಾತಂತ್ರ್ಯ ಸುಧೆಯ ಪಾನಮಾಡಬಯಸುವವರು ಸೈನ್ಯದ್ದ ಇಲ್ಲವೆ ಪೋಲೀಸರ ಸಹಾಯವನ್ನಪೇಕ್ಷಿಸದೆ ತಮ್ಮ ಶಕ್ತಿಯನ್ನು ಅವಲಂಬಿಸತಕ್ಕದ್ದು. ಅದಕ್ಕೂ ಮಹತ್ವದ್ದೆಂದರೆ ಮಾನಸಿಕ ಬಲವನ್ನು ಅವಲಂಬಿಸುವದು ಅವಶ್ಯವಾಗಿದೆ. ಈ ಮಾನಸಿಕಬಲ, ಆತ್ಮಬಲ, ಶಸ್ತ್ರಬಲಕ್ಕಿಂತ ಭಿನ್ನವಾಗಿವೆ.

ಹೊಸದಿಲ್ಲಿ — ಮೋ. ಕ. ಗಾಂಧಿ
೯—೯—೪೬

## ಪಂಡಿತ ನೆಹರೂರ ಹೇಳಿಕೆ

ದಕ್ಷಿಣ ಆಫ್ರಿಕೆಯಲ್ಲಿ ಇದೀಗ ನಡೆದ ಅಹಿಂಸಾತ್ಮಕ ಹೋರಾಟವನ್ನು ಬಿಟ್ಟುಗೊಟ್ಟು ಹಿಂಸಾತ್ಮಕ ಹೋರಾಟಕ್ಕಾಗಿ ಹಲವು ಜನರು ನನ್ನ ಹೆಸರನ್ನು ಮುಂದೆ ಮಾಡಿ ಪ್ರಚಾರ ನಡೆಸಿರುವರೆಂದೂ ಈ ಹಿಂಸಾತ್ಮಕ ಹೋರಾಟಕ್ಕಾಗಿ ಆಫ್ರಿಕನ್‌ರ ಮತ್ತು ಉಳಿದವರ ಸಂಬಂಧವನ್ನು ಕೋರಲಾಗುತ್ತಿದೆಂದೂ ದರ್ಬಾನದಿಂದ ಗೆಳೆಯರೊಬ್ಬರಿಂದ ನನಗೆ ತಿಳಿದು ಬರುತ್ತದೆ. ಆಫ್ರಿಕದಲ್ಲಿಯ ಹಿಂದೀಯರು ತಮ್ಮ ಹೋರಾಟದಲ್ಲಿ ಹಿಂಸಾಮಾರ್ಗವನ್ನನುಸರಿಸಿದರೆ ಅತ್ಯಂತ ಘಾತಕವಾಗುವದೆಂದು ನನ್ನ ಸ್ಪಷ್ಟ ಅಭಿಪ್ರಾಯವಾಗಿದ್ದುದರಿಂದ ಇದನ್ನು ಕೇಳಿ ನನಗೆ ಆಶ್ಚರ್ಯವೆನಿಸಿದೆ. ಹಿಂದುಸ್ತಾನದಲ್ಲಿ ಅಹಿಂಸಾತ್ಮಕ ಹೋರಾಟ ಇಷ್ಟವಾಗಿದ್ದರೆ ದಕ್ಷಿಣ ಆಫ್ರಿಕೆಯಲ್ಲಿಯ ವಿಶಿಷ್ಟ ಪರಿಸ್ಥಿತಿಯಲ್ಲಿ ಅದು ಮತ್ತಷ್ಟು ಅವಶ್ಯಕವಾಗಿದೆ. ದಕ್ಷಿಣ ಆಫ್ರಿಕೆಯಲ್ಲಿಯ ಹಿಂದೀಯರು ಅಲ್ಲಿನ ಆಫ್ರಿಕನ್‌ರೊಡನೆ ಸಹಕರಿಸಬೇಕೆಂದು ನಾನು ಆಗಾಗ ಹೇಳಿದ್ದುಂಟು. ಅವರು ಹಾಗೆ ಮಾಡುವರೆಂದು ನನ್ನ ಆಸೆ. ಆಫ್ರಿಕೆಯಲ್ಲಿ ಎತ್ತಲ್ಪಟ್ಟ ಮುದ್ದೆ ಹಿಂದುಸ್ತಾನದ ಮುದ್ದೆಗಿಂತ ಸ್ವಲ್ಪ ವಿಶಿಷ್ಟವಾಗಿದೆ. ಏಶಿಯನ್‌ರಿಗೆಲ್ಲ ಅನ್ವಯಿಸುವ ಪ್ರಶ್ನೆಯದು. ಎಲ್ಲ ಆಫ್ರಿಕನ್‌ರಿಗಂತೂ ಅದೇ ಪತ್ತೇಹತ್ತುವದು. ಆದುದರಿಂದ ಸಂತ್ರಸ್ತರೆಲ್ಲರ ಸಹಕಾರ ಅತ್ಯವಶ್ಯವಾಗಿದೆ. ಸಹಕಾರ ಪರಿಣಾಮಕಾರಕ ಮತ್ತು ಯಶಸ್ವಿಯಾಗಬೇಕಾದರೆ ಶಾಂತ ಮಾರ್ಗದಿಂದಲೆ ಸಾಧ್ಯ. ಹಿಂಸಾಚಾರಕ್ಕೆಳಸುವದು ಮೂರ್ಖತನದ್ದಾಗುವದು.

## ಸ್ವಾತಂತ್ರ್ಯೋತ್ಸವ

ಇಜಿಪ್ತದಿಂದ ಹಿಂದೀ ಗೆಳೆಯನೊಬ್ಬ ಬರೆಯುತ್ತಾನೆ.

"ಹಿಂದುಸ್ತಾನ ಬೇಗನೆ ತನ್ನ ಸ್ವಾತಂತ್ರ್ಯ ಪಡೆಯಲಿದೆ ಮತ್ತು ದೇಶದಲ್ಲೆಲ್ಲ ಆ ಉತ್ಸವವನ್ನು ಆಚರಿಸಲಾಗುತಿದೆಂದು ರೇಡಿಯೋ ಮೂಲಕ ಮತ್ತು ವೃತ್ತಪತ್ರಗಳ ಮೂಲಕ ನಾವು ತಿಳಿದುಕೊಂಡೆವು. ಇಲ್ಲಿರುವ ಹಿಂದೀ ಜನಾಂಗ ಈ ಉತ್ಸವದಲ್ಲಿ ಭಾಗವಹಿಸಬೇಕೆಂದು ಬಯಸುತಿದೆ. ದೇಶವು ನಿಜವಾಗಿ ಸ್ವತಂತ್ರವಾಗಿದೆಂಬ ಬಗ್ಗೆ ನೀವು ಸಂಪೂರ್ಣ ಸಮಾಧಾನ ಹೊಂದುವ ವರೆಗೆ ನಾವು ಇತ್ತ ಲಕ್ಷ ಪೂರಯಿಸುವದಿಲ್ಲ. ನಿಮ್ಮಿಂದ ಉತ್ತರವನ್ನು ಅಪೇಕ್ಷಿಸುತ್ತೇವೆ."

ಗಾಂಧೀಜಿ ಉತ್ತರ ರೂಪವಾಗಿ ಹೀಗ್ಗೆ ಬರೆದಿದ್ದಾರೆ.

"ನಿಮ್ಮ ಪತ್ರ ಮುಟ್ಟಿತು. ದಾರೀ ನೋಡುವದಾಗಿ ನಿರ್ಧರಿಸಿ ನೀವು ಒಳ್ಳೆಯದನ್ನೆ ಮಾಡಿದಿರಿ. ನಾವು ನಿಜವಾಗಿ ಸ್ವತಂತ್ರರಾಗುವವರೆಗೆ ಉತ್ಸವ ಮಾಡುವದರಲ್ಲಿ ಅರ್ಥವೇನಿದೆ? ಸ್ವಾತಂತ್ರ್ಯದ್ವಾರವೀಗ ತೆರೆದಿದೆಂದು ಮಾತ್ರ ಬಹಳಾದರೆ ಹೇಳಬಹುದು. ಆದರೆ ಅದರಿಂದ ಸಮಾಧಾನ ಹೊಂದುವದು ಅತಿ ಮೂರ್ಖತನದ್ದಾಗುವದು. ನಮ್ಮ ನಗರಗಳಲ್ಲಿ ಹಿಂದೂ ಮುಸಲ್ಮಾನರಿಂದು ಪರಸ್ಪರ ಬಡಿದಾಡಹತ್ತಿದ್ದಾರೆ. ಈ ಪರಿಸ್ಥಿತಿಯಲ್ಲಿ ಹೊರನಾಡುಗಳಲ್ಲಿರುವ ಹಿಂದೀಯರು ಐಕ್ಯದ ಸಂದೇಶ ಬೀರುತ್ತ ಸ್ವಾತಂತ್ರ್ಯ ದ್ವಾರದಲ್ಲಿ ಉತ್ತಮ ರೀತಿಯಿಂದ ಸಹಾಯಕರಾಗಬಲ್ಲರು. ಇಜಿಪ್ತದಲ್ಲಿರುವ ನೀವು ಈ ವಿಷಯದಲ್ಲಿ ಅಮೂಲ್ಯ ಸೇವೆಯನ್ನು ಸಲ್ಲಿಸಬಲ್ಲಿರಿ."

ಹೊಸದಿಲ್ಲಿ (ಹರಿಜನ ಬಂಧುವಿನಿಂದ)
೮—೯—೪೬

## ದೇವದಾಸೀ ಪದ್ಧತಿ

ಪತ್ರ ಲೇಖಕರೊಬ್ಬರು ಬರೆಯುತ್ತಾರೆ.—

"ಹರಿಜನರ ಉದ್ಧಾರಕ್ಕಾಗಿ ನೀವು ಶಕ್ತಿಮೀರಿ ಪ್ರಯತ್ನಿಸುತಿರುವಿರಿ ಮತ್ತು ನಿಮ್ಮ ಬಹುಮೂಲ್ಯ ವೇಳೆಯನ್ನು ಹರಿಜನ ವಸತಿಯಲ್ಲಿಯೆ ಕಳೆಯುತಿರುವಿರೆಂಬುದು ಸುವಿಖ್ಯಾತವೆ ಆಗಿದೆ. ಆದರೆ ಪುಣೆ ಮುಂಬೈಗಳಲ್ಲಿ ಹರಿಜನ ಜಾತಿಯ ಸಾವಿರಾರು ದೇವದಾಸಿಗಳು ವಾಸಿಸುತಿದ್ದು ಸೂಳೆಯರ ಧಂದೆಯನ್ನು ಮಾಡುತಿರುವರೆಂಬುದು ನಿಮ್ಮ ಮನವರಿಕೆ ಮಾಡಿಕೊಡಬಹುದೊ? ಇದು ಹೀಗೇಕಾಗಬೇಕು? ಆ ಹೆಂಗಳೆಯರು ಕನಿಷ್ಠ ಜಾತಿಗೆ ಸೇರಿದುದರಿಂದ ಶೀಲವನ್ನು ಕಳೆದುಕೊಳ್ಳುವಂತೆ ಮನವಲಿಸಲ್ಪಟ್ಟು ಸಾರ್ವಜನಿಕರ ಅಲಕ್ಷ್ಯಕ್ಕೆ ಕಾರಣರಾಗಿರುವರೊ? ಸೂಳೆಯ ಸಂಸಾರ ಸಾಗಿಸುವ ನಾಚಿಕೆಗೇಡು ಧಂದೆಗೆ ಅವರು ಇಳಿದದ್ದಕ್ಕೆ ಇದೇ ಕಾರಣವೋ? ಇದು ಅತ್ಯಂತ ಮಹತ್ವದ ಮತ್ತು ಅವಸರದ ಸಮಸ್ಯೆಯಾಗಿದೆಂದು ಹೇಳುವದು ನ್ಯಾಯ್ಯವಷ್ಟೆ. ಮದ್ರಾಸ ಸರಕಾರದವರು ಇಂಡಿಯನ್ ಪಿನಲ್ ಕೋಡಿನ ೩೬೬ ಅ ೩೬೬ ಬ, ೩೭೨ ಮತ್ತು ೩೭೩ ಕಲಮುಗಳನ್ವಯ (ಪುಟ ನಂಬರ ೫೭೪) ಮದುರೆಯಲ್ಲಿ ಈ ಬೇಕಾಯದೇಶೀರ ಪದ್ಧತಿಯನ್ನು ಕಿತ್ತಿಹಾಕಿದಂತೆ ಮುಂಬಯಿ ಸರಕಾರದವರು ಇದನ್ನು ನಿಲ್ಲಿಸಲಾರರೊ?"

"ಮಂದಿರದಲ್ಲಿಯಾಗಲಿ ಉಳಿದ ಕಡೆಗಳಲ್ಲಾಗಲಿ ಇದ್ದ ಈ ದೇವದಾಸಿ ಪದ್ಧತಿಯೆಷ್ಟೊಂದು ನಾಚಿಕೆಗೇಡಾಗಿದೆಂಬ ಬಗ್ಗೆ ಒಂದು ಸಲವಲ್ಲ ಹಲವು ಸಲ ಬರೆದಿದ್ದೇನೆ. ಶೀಲವಿಲ್ಲದ ಹೆಣ್ಣು ಮಕ್ಕಳಿಗೆ 'ಸೂಳೆಯರು' ಎಂಬ ಪದ ಅನ್ವಯಿಸುತ್ತದೆ. ) ಆದರೆ ಪಾಪಕೃತ್ಯದಲ್ಲಿ ತೊಡಗಿದ ಗಂಡಸರೂ ಸೂಳೆಯರ ಸಂಸಾರ ಸಾಗಿಸುತ್ತಿರುವ ಹೆಣ್ಣುಮಕ್ಕಳಷ್ಟೆ ಪಾಪಿಗಳು. ಹೆಣ್ಣುಮಕ್ಕಳಾದರೂ ತಮ್ಮ ಹೊಟ್ಟೆ ತುಂಬಿಕೊಳ್ಳಲು ಅನೇಕ ಸಂದರ್ಭಗಳಲ್ಲಿ ಸೂಳೆಯರ ಜೀವನ ಸಾಗಿಸುವುದುಂಟು. ಈ ದುಷ್ಟಪದ್ಧತಿಯನ್ನು ಬೇಕಾಯದೇಶೀರವೆಂದು ಸಾರಬೇಕು. ಆದರೆ ಕಾಯಿದೆ ಕೆಲ ಮಟ್ಟಿಗೆ ಮಾತ್ರ ಸಹಾಯಕವಾಗಬಲ್ಲದು. ಕಾಯಿದೆ ಇದ್ದರೂ ಪ್ರತಿಯೊಂದು ದೇಶದಲ್ಲಿ ರಹಸ್ಯವಾಗಿಯು ಪಾಪಕೃತ್ಯ ನಡೆಯುತಿದೆ. ಪ್ರಚಂಡ ಸಾರ್ವಜನಿಕ ಅಭಿಪ್ರಾಯ ಕಾಯದೆಗೆ ಪ್ರತಿಬಂಧವಾಗುವಂತೆ ಅದಕ್ಕೆ ಸಹಾಯಕವ್ವೂ ಆಗಬಹುದು.

ಹೊಸದಿಲ್ಲಿ — ಮೋ. ಕ. ಗಾಂಧಿ
೨—೯—೪೬

## ಲಂಡನದಲ್ಲಿ ಗಾಂಧಿ ಜಯಂತಿ ಕಾರ್ಯಕ್ರಮ

ಸ್ವರಾಜ್ಯಭವನದವರು "ಗಾಂಧಿ ಜಯಂತಿ" ಸಪ್ತಾಹವನ್ನು ತಾ. ೨೬ ರಿಂದ ಅಕ್ಟೋಬರ ೨ ರ ವರೆಗೆ ಆಚರಿಸಲಿದ್ದಾರೆ. ಪ್ರಾರಂಭದ ದಿನ ಕಾಂಗ್ರೆಸ ಪ್ರಾಥಮಿಕ ಸದಸ್ಯರ ಪರಿಷತ್ತು ಕೂಡುವದು.

ಅಕ್ಟೋಬರ ೨ ಕ್ಕೆ ಸಾರ್ವಜನಿಕ ಸಭೆಯನ್ನೇರ್ಪಡಿಸಲಾಗಿದೆ. ಅಂದು ಪಾರ್ಲಿಮೆಂಟ ಸದಸ್ಯ ಡಬ್ಲ್ಯು. ಜಿ. ಕೋವ, ಫೆನ್ನರ ಬ್ರಾಕವೆ ಎಚ್. ಎಸ್. ಬ್ರೇಲ್ಸಫರ್ಡ, ಚೌಧರಿ ಅಕ್ಬರ ಖಾನ, ಸ್ವಾಮಿ ಅವ್ಯಕ್ತಾನಂದ ಮೊದಲಾದವರು ಭಾಷಣ ಮಾಡುವರು.

ಅಂದಿನ ದಿನ ಸ್ವರಾಜ್ಯಭವನದ ಮುಖಪತ್ರಿಕೆಯಾದ "ಹಿಂದುಸ್ತಾನ" ಪ್ರಸಿದ್ಧವಾಗುವದು. ಡಾ. ಗಂಗೂಲಿಯವರು ಇದರ ಸಂಪಾದಕರಿರುವರು.

---

ಗಾಂಧಿ ಜಯಂತಿ ಸಂಬಂಧದಲ್ಲಿ ಮುಂಬಯಿ ಪ್ರಾಂತಿಕ ಕಾಂಗ್ರೆಸ ಕಮಿಟಿಯವರು ಸಂಘಟಿಸಿದ ಅ. ಭಾ. ಖಾದಿ ಹಾಗು ಗ್ರಾಮೋದ್ಯೋಗ ಪ್ರದರ್ಶನ ಗಲಭೆ ಮೂಲಕ ಮುಂದೂಡಲಾಗಿದೆ. ರಾಷ್ಟ್ರೀಯ ಸಪ್ತಾಹದಲ್ಲಿ ಅದು ನಡೆಯುವದು.



# ನಾರದ ಪತ್ರ

## ನಾನು ಸರ್ವಾಧಿಕಾರಿಯಾದರೆ

"ನಾನು ಸರ್ವಾಧಿಕಾರಿಯಾದರೆ, ಧರ್ಮವೂ ಸರಕಾರವೂ ಬೇರೆ ಬೇರೆಯಾಗಿರುವಂತೆ ಮಾಡುವೆ. ನನಗೆ ಧರ್ಮದಲ್ಲಿ ಶ್ರದ್ಧೆಯುಂಟು. ಅದಕ್ಕಾಗಿ ನಾನು ಸಾಯಲೂ ಸಿದ್ಧ. ಆದರೆ ಅದು ನನ್ನ ವೈಯಕ್ತಿಕ ವಿಷಯ. ಸರಕಾರಕ್ಕೂ ಅದಕ್ಕೂ ಏನೂ ಸಂಬಂಧವಿಲ್ಲ," ಹೀಗೆಂದು ಕೆಲ ಸಮಯ ಹಿಂದೆ ಗಾಂಧೀಜಿ ಕ್ರೈಸ್ತ ಮಿಶನರಿ ಗೆಳೆಯನೊಬ್ಬನಿಗೆ ಉತ್ತರ ಕೊಟ್ಟಿದ್ದರು. ಸ್ವತಂತ್ರ ಹಿಂದುಸ್ತಾನದಲ್ಲಿ ಪೂರ ಧಾರ್ಮಿಕ ಸ್ವಾತಂತ್ರ್ಯವಿರುವದೆ? ಅದರಲ್ಲಿ ಧರ್ಮವೂ ಸರಕಾರವೂ ಬೇರೆ ಬೇರೆಯಾಗಿರುವವೆ? ಎಂದು ಆತ ಕೇಳಿದ್ದ. "ನಿಮ್ಮ ಪ್ರಾಪಂಚಿಕ ಹಿತ, ಆರೋಗ್ಯ, ಮಾರ್ಗಸೌಕರ್ಯ, ವಿದೇಶ ವಿಚಾರ, ಚಲನ ಇತ್ಯಾದಿ ಸಂಗತಿಗಳನ್ನು ಸರಕಾರ ನೋಡಿಕೊಳ್ಳುವದು ಹೊರತು ನಿಮ್ಮ ನನ್ನ ಧರ್ಮದ ವಿಚಾರವನ್ನಲ್ಲ. ಅದು ಪ್ರತಿಯೊಬ್ಬನ ವೈಯಕ್ತಿಕ ಹವ್ಯಾಸ." ಅನಂತರ ಅವರು ಮುಂದುವರಿದು ಧರ್ಮದ ಬಗೆಗೆ ತಮ್ಮ ಕಲ್ಪನೆಯನ್ನು ವಿವರಿಸಿದರು. "ನೀವು ನಮ್ಮ ಜೀವನವನ್ನು ಪರಿಶೀಲಿಸಬೇಕು—ನಾನು ಹೇಗೆ ಜೀವಿಸುತ್ತೇನೆ, ಉಣ್ಣುತ್ತೇನೆ, ಕೂಡುತ್ತೇನೆ, ಮಾತಾಡುತ್ತೇನೆ, ನನ್ನ ಸಾಮಾನ್ಯ ನಡೆವಳಿಕೆಯೇನು—ಇತ್ಯಾದಿಯನ್ನು ಲಕ್ಷಿಸಬೇಕು. ನನ್ನಲ್ಲಿರುವ ಇವೆಲ್ಲವುಗಳ ಒಟ್ಟು ಮೊತ್ತವೇ ನನ್ನ ಧರ್ಮ."

"ಸ್ತ್ರೀಯರ ರಾಜಕೀಯ, ವೈಜ್ಞಾನಿಕ, ಧಾರ್ಮಿಕ ಅಂದೋಲನಗಳಲ್ಲಿ ಯಾವುದು ನಾಳಿನ ಜಗತ್ತಿನಲ್ಲಿ ಅತ್ಯಂತ ಪ್ರಭಾವಶಾಲಿಯಾದೀತು? ಜಾಗತಿಕ ವಿಚಾರಗಳಲ್ಲಿ, ಮಾನವ ಕುಲದ ಕಲ್ಯಾಣಸಾಧನೆಯಲ್ಲಿ ಯಾವುದು ಅತ್ಯಂತ ಪರಿಣಾಮವನ್ನು ಮಾಡಿದೆಯೆಂದು ಇನ್ನು ೫೦ ವರ್ಷಗಳ ನಂತರ ಪರಿಗಣಿಸಲ್ಪಡಬಹುದು? ಎಂಬ ಪ್ರಶ್ನೆಗಳಿಗೆ ಉತ್ತರವೀಯುತ್ತ ಅವರು ಧಾರ್ಮಿಕ ಚಳವಳಿಯನ್ನು ಉಳಿದವುಗಳ ರಾಶಿಯಲ್ಲಿ ಸೇರಿಸುವದು. ಸರಿಯಲ್ಲವೆಂದು ಉಲಿದರು. "ಭವಿಷ್ಯತ್ ಜಗತ್ತಿನಲ್ಲಿ ಅತ್ಯಂತ ಪ್ರಭಾವವನ್ನು ಬೀರುವದು ಧಾರ್ಮಿಕ ಅಂದೋಲನ" ಎಂದರವರು. "ಇಂದು ಕೂಡ ಅದು ಪ್ರಭಾವಶಾಲಿಯಾಗಿರಬಹುದಾಗಿತ್ತು. ಆದರೆ ಅದಿಂದು ಶನಿವಾರದ ಅಥವಾ ರವಿವಾರದ ಕಾರ್ಯಕ್ರಮದ ಮಟ್ಟಕ್ಕೆ ಇಳಿದು ಹೋಗಿದೆ. ಮನುಷ್ಯನ ಜೀವನದ ಪ್ರತಿಕ್ಷಣದಲ್ಲಿಯೂ ಆಚರಣೆಯಲ್ಲಿರಬೇಕಾದ ವಸ್ತುವದು. ಅಂಥ ಧರ್ಮ ತಲೆದೋರಿದಾಗ ಅದು ಜಗತ್ತನ್ನೇ ಆಳುವದು."

"ಈಚೆಗೆ, ಮುಖ್ಯವಾಗಿ ಹಿಂದುಸ್ತಾನದಲ್ಲಿ, ಅಂಕೆಯಲ್ಲಿಯೂ ಅಳತೆಯಲ್ಲಿಯೂ ಹೆಚ್ಚುತ್ತಿರುವ ಕೂಲಿಕಾರ ಸಂಪುಗಳಿಗೆ ಏನಾದರೂ ವಿಶೇಷ ಅರ್ಥವುಂಟೆಂದು ನಿಮಗೆ ತೋರುತ್ತದೆಯೆ?" ಎಂದು ಅವರನ್ನು ಕೇಳಲಾಯಿತು. "ಈ ಕೂಲಿಕಾರ ತಂಟೆಗಳ ಪರಿಣಾಮ ಹಿಂದುಸ್ತಾನದಲ್ಲಿ ಏನಾಗಬಹುದೆಂದು ಎಣಿಸುವಿರಿ?"

"ಇಂದು ಸಂಪುಗಳು ಸಾರ್ವತ್ರಿಕ ಪಿಡುಗಾಗಿಬಿಟ್ಟಿವೆ," ಗಾಂಧೀಜಿ ಮಾನುಡಿದರು. "ಎಲ್ಲೆಲ್ಲಿಯೂ ಸಂಪುಗಳು ಹಬ್ಬಿವೆ. ಇಂಗ್ಲಂಡ್, ಅಮೇರಿಕೆಗಳೂ ಇದಕ್ಕೆ ಹೊರತಲ್ಲ. ಆದರೆ ಹಿಂದುಸ್ತಾನದಲ್ಲಿ ಅವುಗಳಿಗೆ ವಿಶೇಷ ಅರ್ಥವುಂಟು. ನಾವು ಅಸ್ವಾಭಾವಿಕ ಪರಿಸ್ಥಿತಿಯಲ್ಲಿ ಬಾಳುತಿದ್ದೇವೆ ಈ ಮುಚ್ಚಳ ತೆರೆದು ಸ್ವಾತಂತ್ರ್ಯದ ಹೊಸಗಾಳಿಯನ್ನು ಒಳಬಿಡುವ ಕಿಡಿಕೆಯೊಂದು ಉಂಟಾದೊಡನೆ ಸಂಪುಗಳ ಸಂಖ್ಯೆ ಬೆಳೆಯುವದು. ಎಲ್ಲೆಡೆ ಹೇಗೊ ಹಾಗೆ ಇಲ್ಲಿಯೂ ಜೀವನವಿಂದು ಬೇರುಸಹಿತ,—ಆ ಬೇರು ಧರ್ಮದಲ್ಲಿತ್ತು—ಕಿತ್ತು ಹೋಗಿರುವದೇ ಈ ವ್ಯಾಪಿಸುತಿರುವ ಸಂಪುಗಳಿಗೆ ಮೂಲಕಾರಣ. ಜೀವನವಿಂದು ಹಣದ ಸಂಧಿಯೊಂದನ್ನೇ ಆಧರಿಸಿ ನಿಂತಿದೆ. ಆ ಆಧಾರ ಬಹಳ ಸಂದಿಗ್ಧವಾದುದು. ಆದರೆ ಧಾರ್ಮಿಕ ತಳಹದಿಯಿರುವಾಗಲೂ ಸಂಪುಗಳು ಆಗೇ ಆಗುವವು. ಏಕೆಂದರೆ ಎಲ್ಲರಿಗೂ ಧರ್ಮವೇ ಜೀವನದ ತಳಹದಿಯಾಗುವ ಸಂಭವ ಕಡಿಮೆ. ಆದುದರಿಂದ ಇತ್ತ ಶೋಷಣೆಯು ಹವಣಿಕೆಯೂ ಅತ್ತ ಸಂಪುಗಳೂ ಇರತಕ್ಕವುಗಳೆ, ಆದರೆ ಆಗ ಈ ಸಂಪುಗಳು ಶುದ್ಧ ಅಹಿಂಸಾತ್ಮಕವಾಗಿರುವವು. ಅಂಥ ಸಂಪುಗಳು ಯಾರಿಗೂ ಏನೂ ಅಪಾಯ ತರಲಾರವು. ಅಂಥ ಸಂಪೇ ಜನರಲ್ ಸ್ಮಟ್ಸರನ್ನು ಜೊಗ್ಗುವಂತೆ ಮಾಡಿತೇನೊ. 'ನೀವು ಒಬ್ಬನೇ ಒಬ್ಬ ಇಂಗ್ಲೀಷನನ್ನು ನೋಯಿಸಿದ್ದರೆ ನಾನು ನಿಮ್ಮನ್ನು ನಿಲ್ಲಿಸಿ ಸುಡಿಸುತಿದ್ದೆ. ನಿಮ್ಮ ಜನರನ್ನು ದೇಶದಿಂದ ಹೊರಗಟ್ಟುತಿದ್ದೆ ಕೂಡ. ಇಷ್ಟಕ್ಕೇ ನಿಮ್ಮನ್ನು ನಾನು ಸೆರೆಮನೆಗೆ ಕಳಿಸಿದ್ದೇನೆ. ನಿಮ್ಮನ್ನೂ ನಿಮ್ಮ ಜನರನ್ನೂ ಬಗ್ಗಿಸಲು ಶತಪ್ರಯತ್ನ ಮಾಡಿದ್ದೇನೆ. ಆದರೆ ನೀವು ಪ್ರತಿಹಿಂಸೆಯನ್ನೇ ಮಾಡದಿರುವಾಗ ನಾನು ಹೀಗೆಯೆ ಎಷ್ಟು ದಿನ ಸಾಗಲಿ?' ಎಂದು ಸ್ಮಟ್ಸರು ನನಗೆ ಕೇಳಿದರು. ಆದುದರಿಂದ ಕೂಲಿಯೊಬ್ಬನ ಸಂಗಡ ಕೂಲಿಗಳ ಪರವಾಗಿ—ಹಾಗೆಂದು ದಕ್ಷಿಣ ಆಫ್ರಿಕೆಯಲ್ಲಿ ಪ್ರತಿಯೊಬ್ಬ ಹಿಂದೀಯನಿಗೂ ಹೆಸರು ಬಿದ್ದಿತ್ತು—ಅವರು ಒಪ್ಪಂದ ಮಾಡಿಕೊಳ್ಳಬೇಕಾಯಿತು."

## ಒಂದು ಘಟನೆ—ಅದರ ಪಾಠ

ಜೀವನದ ಪ್ರತಿಕ್ಷಣದಲ್ಲಿಯೂ ತಮ್ಮ ಮೇಲೆ ತಾವೇ ಕಾವಲು ನಿಲ್ಲುವ ಅಭ್ಯಾಸವನ್ನು ಗಾಂಧೀಜಿ ಚನ್ನಾಗಿ ಸಾಧಿಸಿಕೊಂಡಿದ್ದಾರೆ. ದಿನನಿತ್ಯವೂ ಅವರು ತಮ್ಮೊಳಗೇ ಒಂದು ನಿಶ್ಶಬ್ದ ನ್ಯಾಯಸ್ಥಾನವನ್ನು ನಡೆಸುತ್ತಾರೆ. ಅದರಲ್ಲಿ ತಮ್ಮ ಕ್ಷುದ್ರಾತ್ ಕ್ಷುದ್ರತರ ಕರ್ಮಗಳನ್ನೂ ಕಠೋರತರ ವಿಚಾರಣೆಗೆ ಗುರಿಪಡಿಸುತ್ತಾರೆ. ಯಾವುದೂ ಅದರ ಪರೀಕ್ಷೆಯಿಂದ ಪಾರಾಗುವಂತಿಲ್ಲ. ಅವರು ತಮ್ಮನ್ನು ಕ್ಷಮಿಸಿಕೊಳ್ಳುವದೂ ಇಲ್ಲ. ಅತಿಶಯೋಕ್ತಿಯೆ ಕರ್ತವ್ಯವಾಗುವ ಸಂದರ್ಭದಲ್ಲಿ, ಸ್ವಂತ ತಪ್ಪುಗಳಿಗೆ ಬಹಿರ್ನಕ್ರ ರಾವುಗನ್ನಡಿ ಹಿಡಿದು ಹೆರವರ ತಪ್ಪುಗಳಿಗೆ ಅಂತರ್ನಕ್ರ ಕನ್ನಡಿ ಹಿಡಿಯಬೇಕೆಂದು ಅವರ ನಂಬಿಕೆ. ಮೊನ್ನೆ ಸಾಯಂಪ್ರಾರ್ಥನೆಯ ಕಾಲಕ್ಕೆ ಇದಕ್ಕೊಂದು ನಿದರ್ಶನ ದೊರಕಿತು. ಹರಿಜನ ಕಾರ್ಯಕ್ಕೋಸ್ಕರ ತಮಗೆ ಅರ್ಪಿಸಲ್ಪಟ್ಟ ಆಭರಣಗಳನ್ನು ಸಾಯಂ ಪ್ರಾರ್ಥನೆಯ ನಂತರ ಲಿಲಾವಿನಿಂದ ಮಾರುವದು ಅವರ ಹಳೆಯ ಸಂಪ್ರದಾಯ. ಈಚೆಗೆ ಸಮಯವನ್ನು ಉಳಿಸುವ ಸಲುವಾಗಿ ಅವರು ಈ ಪದ್ಧತಿಯನ್ನು ಬಿಟ್ಟುಗೊಟ್ಟಿದ್ದರು. ಆದರೆ ತಮ್ಮ ಸಮಯವನ್ನುಳಿಸಿಕೊಳ್ಳಲು ತಮ್ಮ ವಿಶೇಷ ರಕ್ಷಣೆಗೊಳಗಾದ ಹರಿಜನರಿಗೆ ಹಾನಿಯೊದಗಿಸತಿರುವೆವೆಂದು ಅವರ ಮನಸು ಕೊರೆಯತೊಡಗಿತು. ಕಾರಣ, ಕಳೆದ ೧೪ ದಿನಗಳಿಂದ ಅವರು ದಿನಕ್ಕೊಂದು ಆಭರಣದಂತೆ ಮಾರುತ್ತ ಹರಿಜನ ನಿಧಿಯ ದೈನಿಕ ಸಂಗ್ರಹವನ್ನು ಇಮ್ಮಡಿಸಿದ್ದಾರೆ. ಹೀಗೆ ೩೦೭೧ ರೂಪಾಯಿ ಬೆಲೆಬಾಳುವ ಆಭರಣಗಳನ್ನು ಪ್ರತಿಯೊಂದಕ್ಕೆ ೧೦೦ ರಿಂದ ೪೦೦ ರೂಪಾಯಿಯ ವರೆಗಿನ ದರದಲ್ಲಿ ಮಾರಲಾಗಿದೆ.

ಆದರೆ ಕಳೆದ ಶನಿವಾರ ಮಳೆಯ ಕಾರಣದಿಂದ ಪ್ರಾರ್ಥನೆಗೆ ಬಂದ ಜನಸಂದಣಿ ಎಂದಿನಷ್ಟಿರಲಿಲ್ಲ. ಜಿನುಗುವ ಡೇರೆಯೊಂದರಲ್ಲಿ ಪ್ರಾರ್ಥನೆ ನಡೆಯಿತು. ನಿತ್ಯದ ಲಿಲಾವಿನ ಕ್ರಮವನ್ನು ಅಂದು ನಿಲ್ಲಿಸಲಾಗಿತ್ತು. ಮುಂದೆ ಇದಕ್ಕಾಗಿ ಗಾಂಧೀಜಿ ತಮ್ಮನ್ನು ತಾವೇ ದೂರಿಕೊಂಡರು. ಇದು ತಮ್ಮಲ್ಲಿರುವ ಶ್ರದ್ಧೆಯ ಅಭಾವವನ್ನು ತೋರಿಸುವದಿಲ್ಲವೆ? ಎಂದವರು ಮರುದಿನ ಪ್ರಾರ್ಥನಾ ಸಭೆಯಲ್ಲಿ ತಮ್ಮನ್ನು ತಾವೇ ಕೇಳಿಕೊಂಡರು. ಜನಸಂದಣಿ ವಿರಳವಾಗಿದ್ದುದರಿಂದ ಲಿಲಾವಿನಿಂದ ಸಾಕಷ್ಟು ಹಣ ಹುಟ್ಟಲಾರದೆಂದು ತಾವು ಭಯಗೊಂಡಿದ್ದೇವೆಂದು ಅವರು ಒಪ್ಪಿದರು. ತಮ್ಮ ದಕ್ಷಿಣ ಆಫ್ರಿಕೆಯ ಗೆಳೆಯರಾದ ಡೌನ್ಸರು ದರ್ಬಾನದ ಒಂದು ಇಗರ್ಜಿಯಲ್ಲಿ ಸಂಜೆ ೬ ಗಂಟೆಗೆ ಮಾತಾಡುವ ಕಾರ್ಯಕ್ರಮವನ್ನಿಟ್ಟುಕೊಂಡವರು ೬ ಬಡಿದಾಕ್ಷಣ ಒಬ್ಬನೇ ಒಬ್ಬ ಸಭಿಕ ಬಂದಿದ್ದರೂ ಭಾಷಣವನ್ನು ಪ್ರಾರಂಭಿಸಿದ್ದರು. ಅವೀಗ ಶುದ್ಧ. "ಶ್ರದ್ಧಾಳುವಾದವನು ಇಡಿ ಜಗತ್ತೆ ಅಸತ್ಯಮಯವಾಗಿದ್ದಂತೆ ತೋರಿದರೂ ಸತ್ಯಕ್ಕೆ ಗಟ್ಟಿಯಾಗಿ ಅಂಟಿಕೊಳ್ಳುವನು," ಎಂದು ಗಾಂಧೀಜಿ ಮುಂದುವರಿದರು. "ದೇವರು ನಿಮಗೆ ಅಂಥ ವಿಶ್ವಾಸವನ್ನು ದಯಪಾಲಿಸಲೆಂದು ನನ್ನ ನಿರಂತರ ಪ್ರಾರ್ಥನೆ. ಆಗೊಮ್ಮೆ ನಾನು ಈಗೊಮ್ಮೆ ದಾರಿ ತಪ್ಪಿದರೂ ಅಂಥ ವಿಶ್ವಾಸ ನನ್ನಲ್ಲಿಯೂ ನೆಲಸುವಂತೆ ನೀವೆಲ್ಲರೂ ಪ್ರಾರ್ಥಿಸಿರಿ."

## ಒಂದು ಹೆಗ್ಗುರುತು?

ಕನು ಗಾಂಧಿಯ ಬುದ್ಧಿಯಲ್ಲಿ ಜನಿಸಿದ ವಿಚಾರಲಹರಿಯೊಂದು ನಿರೀಕ್ಷೆ ಮೀರಿ ಯಶಸ್ವಿಯಾಗಿದೆ. ಅವನು ಯೋಜಿಸಿದ ಹನ್ನೊಂದು ದಿನಗಳ ಶಿಕ್ಷಣ ಪ್ರಣಾಲಿಗೆ ತಕ್ಷಣ —ಬೆಂಬಲ ದೊರಕಿತು: ೧೧ ತಾರೀಖಿನೊಳಗೆ ೧೫೪ ಅರ್ಜಿಗಳು ಬಂದವು. ಆಮೇಲೆ ಮೊದಲೇ ಪ್ರಕಟಿಸಿದಂತೆ ಅರ್ಜಿಗಳ ಸ್ವೀಕಾರವನ್ನು ನಿಲ್ಲಿಸಲಾಯಿತು. ಪರಿಣಾಮವಾಗಿ ಎಷ್ಟೋ ಜನರು ನಿರಾಶರಾಗಿ ಹಿಂತಿರುಗಬೇಕಾಗಿ ಬಂತು. ಅದರಿಂದೀಚೆಗೆ, ಹಗಲಲ್ಲಿ ಬರಲಾರದವರಿಗೆ ರಾತ್ರಿಯಲ್ಲೊಂದು ತರಗತಿ ತೆರೆಯಬೇಕೆಂಬ ಅಪೇಕ್ಷೆಗಳು ಬಂದಿವೆ. ಆ ವಿಚಾರ ಪರಿಶೀಲನೆಯಲ್ಲಿದೆ. ಹತ್ತಿಯ ಬೀಜ ತೆಗೆದು ತುನಾಯಿ ಮಾಡುವದನ್ನು ಮೊದಲ್ಗೊಂಡು ನೂಲುವ ಹಾಗು ಸಂಬಂಧಪಟ್ಟ ಕೆಲಸಗಳಲ್ಲಿ ಶಿಕ್ಷಣ ಕೊಡಲಾಗುತಿದೆ. ಶಿಕ್ಷಣಾಪೇಕ್ಷಿಗಳು ಎರಡು ಗುಂಪುಗಳಲ್ಲಿ ಬರುತ್ತಾರೆ— ಒಂದು ಮುಂಜಾನೆ ೭ರಿಂದ ೧೧ರ ವರೆಗೆ ಇನ್ನೊಂದು ಮಧ್ಯಾಹ್ನ ೨ರಿಂದ ೫ ರ ವರೆಗೆ ಮೊದಲನೆ ಗುಂಪಿನಲ್ಲಿ ಗಂಡಸರ ಹೆಚ್ಚಳ, ಎರಡನೆಯದರಲ್ಲಿ ಹೆಂಗಸರದು ಮುಂಜಾನೆ ಬರುವವರಲ್ಲಿ ನೂರಕ್ಕೆ ೬೦ರಷ್ಟು ಜನ ಸರಕಾರಿ ನೋಕರರು. ಬರುವವರಲ್ಲಿ ಹೆಚ್ಚಿನವರು ಅನುಕೂಲವಂತ ವರ್ಗದವರಾಗಿದ್ದು, ಪರೋಪಕಾರ ಬುದ್ಧಿಯಿಂದ ಪ್ರೇರಿತರಾಗಿದ್ದಾರೆಂದು ಹೇಳಬಹುದು. ಸುಡುವ ಶಕೆಯಲ್ಲಿ ಡೇರೆಯ ತೆಳ್ಳನ್ನ ನೆರಳಲ್ಲಿ ಅವರು ಬೆನ್ನಬಾಗಿಸಿ ಕೆಲಸಮಾಡುತಿರುವದನ್ನು ನೋಡುವದೇ ಒಂದು ಆನಂದ. ಯೋಜನೆಗೆ ದೊರೆತ ಬೆಂಬಲವೆಷ್ಟು ಅನಿರೀಕ್ಷಿತವಾಗಿತ್ತೆಂದರೆ, ಪ್ರಾರಂಭದಲ್ಲಿ ಅವಶ್ಯ ಸಾಮಗ್ರಿಗಳನ್ನು ಕೂಡಹಾಕುವುದೇ ಕಠಿನಹೋಯಿತು. ಈಚೆಗೆ ಆ ತೊಂದರೆಯನ್ನು ನೀಗಿಸಲಾಗಿದೆ. ಅವನು ಕೆಲಸ ಮಾಡುತಿರುವಾಗ ಗಾಂಧೀಜಿ ಬೆಳಗ್ಗೊಮ್ಮೆ ಬೈಗೊಮ್ಮೆ ಬಂದು ಪರೀಕ್ಷಿಸುತ್ತಾರೆ. ಸಂಜೆ ಪ್ರಾರ್ಥನಾ ಕಾಲದಲ್ಲಿ ಅವರು ತಮ್ಮ ಅಭಿಪ್ರಾಯವನ್ನು ಸಭೆಯ ಮುಂದೆ ಸಂಗ್ರಹವಾಗಿ ಹೇಳುತ್ತಾರೆ. ನಿನ್ನೆ ಅವರು ತಮ್ಮ ವಿಚಾರಗಳನ್ನು ಈ ಪರಿ ವ್ಯಕ್ತಗೊಳಿಸಿದರು: "೧೪೪ ಜನರು ದಿನವೂ ತುಂಬನಂಬಿಕೆಯಿಂದ ನೂಲುವ ತರಗತಿಗಳಿಗೆ ಬರುತಿರುವದನ್ನು ಕಂಡಾಗ ಎಂದಾದರೊಂದು ದಿನ ಇಡಿ ಹಿಂದುಸ್ತಾನವೇ ಖಾದೀಧಾರಿಯಾಗಲಿದೆಯೆಂಬ ಆಶೆಯನ್ನು ನಾನು ಮತ್ತಷ್ಟು ಬಲವಾಗಿ ಹಚ್ಚಿಕೊಳ್ಳುವಂತಾಗಿದೆ. ೧೯೧೮ರಲ್ಲಿ ನಾನು ಖಾದಿಯ ಪುನರುಜ್ಜೀವನವನ್ನು ಪ್ರಾರಂಭಿಸಿದಾಗ ಹಿಂದುಸ್ತಾನ ದೇಶೀ ಗಿರಣಿ ಬಟ್ಟೆಯನ್ನು ಬಿಟ್ಟು ೬೦ ಕೋಟಿ ರೂಪಾಯಿಯ ವಿದೇಶಿ ಬಟ್ಟೆಯನ್ನು ಕೊಳ್ಳುತಿತ್ತು. ಇದು ಆಯಾತಗಳಲ್ಲೆಲ್ಲ ಅತಿ ದೊಡ್ಡ ಅಂಶವಾಗಿತ್ತು. ಅದರೊತ್ತಿಗೆ ಸಕ್ಕರೆ ೧೮ ಕೋಟಿ ರೂಪಾಯಿಯದು, ಲೋಹ ಸಾಮಗ್ರಿ ೭ ಕೋಟಿ ರೂಪಾಯಿಯದು ಆಯಾತವಾಗುತಿದ್ದವು. ಇಂದು ಉಬ್ಬರದ ಬೆಲೆಗಳ ಲೆಕ್ಕದಲ್ಲಿ ನಾವು ಬಳಸುವ ಎಲ್ಲ ಗಿರಣಿಬಟ್ಟೆ ಸ್ವದೇಶಿ ಮತ್ತು ವಿದೇಶಿ ಸೇರಿ ೩೦೦ ಕೋಟಿ ಬೆಲೆ ಬಾಳಬಹುದು. ಈ ೩೦೦ ಕೋಟಿ ರೂ. ಬೆಲೆಯ ಬಟ್ಟೆಯನ್ನು ನಮ್ಮ ಸ್ವಂತ ಕೈಗಳಿಂದ ಹಿಂದುಸ್ತಾನದ ಹಳ್ಳಿಗಳಲ್ಲಿ ತಯಾರಿಸಿದ್ದಾದರೆ ಅದೆಂಥ ಸಂಪತ್ತಿಯಾಗಬಹುದೆಂಬುದನ್ನು ಸಭಿಕರೇ ನೆನೆದುಕೊಳ್ಳಲಿ. ಅದೊಂದು ಚಿನ್ನದ ಗಣಿಯೇ ಸರಿ. ಖಾದಿ ಸರ್ವವ್ಯಾಪಿಯಾದರೆ ಹಳ್ಳಿಗರು ಅಭೂತಪೂರ್ವ ಶ್ರೇಯಸ್ಸನ್ನು ಕಾಣಬಹುದು. ಇಂದು ನಮ್ಮ ಜನತೆ ಬಡತನದಿಂದ ಬೆಂಡಾಗಿ ಹೋಗಿದೆ. ಅದರ ಕಣ್ಣಲ್ಲಿ ಆಶೆಯ ಜ್ಯೋತಿಯಾಗಲಿ ತೀವಳಿಕೆಯ ಹೊಳಪಾಗಲಿ ಶೂನ್ಯವಾಗಿದೆ. ನೂಲು

—೧೦ನೇ ಪುಟ ನೋಡಿರಿ

## ದಾಶರಥಿರಾಮ

ಒಬ್ಬ ಆರ್ಯಸಮಾಜಿ ಬರೆಯುತ್ತಾರೆ.

"ನೀವು ಅಜರಾಮರನೆಂದು ನಂಬುವ ರಾಮನು ದಶರಥನ ಮಗ, ಸೀತೆಯ ಗಂಡನೆಂತಾದಾನು? ನಾನು ನಿಮ್ಮ ಪ್ರಾರ್ಥನಾ ಮಂಡಲಿಗೆ ಆಗಾಗ್ಗೆ ಬರುತಿರುತ್ತೇನೆ. ಆದರೆ ಆವಾಗೆಲ್ಲ ಈ ಸಂದೇಹ ನನ್ನನ್ನು ಬಾಧಿಸುತ್ತಲೆ ಇರುತ್ತದೆ. ಆದರಿಂದಲೇ ರಾಮಧುನಿಯಲ್ಲಿ ದನಿಗೂಡಿಸಲು ನನಗೆ ಸಾಧ್ಯವಾಗದೆ ಹೋಗಿದೆ ಎಲ್ಲರೂ ಅದರಲ್ಲಿ ಕೂಡಿಕೊಳ್ಳಬೇಕೆಂದು ನೀವನ್ನುತಿರುವದು ಯೋಗ್ಯವಾಗಿರುವದರಿಂದ ನನ್ನ ಈ ಚರ್ಚೆಯಿಂದ ನಾನೇ ನೊಂದುಕೊಳ್ಳುತ್ತೇನೆ. ಎಲ್ಲರೂ ಅದರಲ್ಲಿ ಸೇರಿಕೊಳ್ಳುವ ಹಾಗೆ ನೀವು ರಾಮಧುನಿಯನ್ನು ಬದಲಿಸಲಾರಿರಾ?"

ಎಲ್ಲರೂ ಎಂಬದಕ್ಕೆ ನಾನು ಯಾವ ಅರ್ಥವನ್ನು ಇಟ್ಟುಕೊಂಡಿರುವೆನೆಂದು ಈಗಾಗಲೇ ವಿವರಿಸಿದ್ದೇನೆ. ಮನಸಾ ಆದರಲ್ಲಿ ಸೇರಿಕೊಳ್ಳಲು ಮತ್ತು ಶ್ರುತಿತಪ್ಪದೆ ಅದನ್ನು ಹಾಡಲು ಸಾಧ್ಯವಿರುವವರಿಗೆಲ್ಲ ಅದು ಅನ್ವಯಿಸುತ್ತದೆ. ಉಳಿದವರು ಮೌನವಾಗಿರಬೇಕು. ಆದರೆ ಇದು ಕ್ಷುಲ್ಲಕ ಸಂಗತಿ. ಮಹತ್ವದ ಪ್ರಶ್ನೆಯೆಂದರೆ, ದಶರಥ ಪುತ್ರನಾದ ರಾಮ ಹೇಗೆ ಅಜರಾಮರನೆನಿಸಬಲ್ಲ? —ಎಂಬದು.] ಸಂತ ತುಲಸಿದಾಸರೇ ಈ ಪ್ರಶ್ನೆಯನ್ನೆತ್ತಿ ತಾವೇ ಅದಕ್ಕೆ ಉತ್ತರಕೊಟ್ಟಿದ್ದಾರೆ. ನಿಜವಾಗಿ ಆ ಉತ್ತರವನ್ನು ತರ್ಕದ ಒರೆಗೆ ಹಚ್ಚುವದು ಸಾಧ್ಯವಿಲ್ಲ.

ತಾರ್ಕಿಕ ಬುದ್ಧಿಗೆ ಅದು ಸಮಾಧಾನವನ್ನು ಕೊಡಲರಿಯದು. ಇದು ಹೃದಯ ಹೃದಯಗಳ ಸಂವಾದದ ವಿಷಯ. ಮೊಟ್ಟಮೊದಲು ನಾನು ಸೀತಾಪತಿ ರಾಮನನ್ನು ಆರಾಧಿಸುತಿದ್ದೆ. ಆದರೆ ಅವನ ವಿಷಯದಲ್ಲಿ ನನ್ನ ತಿಳುವಳಿಕೆಯೂ ಅನುಭವವೂ ಬೆಳೆದಂತೆಲ್ಲ ನನ್ನ ರಾಮ ಅಜರಾಮರ ಸರ್ವತ್ರ ವ್ಯಾಪಿಯಾಗಿ ರೂಪುಗೊಂಡ. ರಾಮನು ಆ ಮೇಲೆ ಸೀತಾಪತಿಯಾಗಿ ಉಳಿಯಲಿಲ್ಲೆಂದು ಇದರ ಭಾವವಲ್ಲ. ಬದಲಿಗೆ ರಾಮನ ಕಲ್ಪನೆಯಿಂದ ಸೀತಾಪತಿಯ ಅರ್ಥ ವಿಕಾಸಗೊಂಡಿತು. ಇದೀಗ ಜಗತ್ತು ವಿಕಾಸಗೊಳ್ಳುವ ಬಗೆ. ಅವನನ್ನು ಬರಿ ದಶರಥ ಪುತ್ರನೆಂದು ತಿಳಿದುಕೊಳ್ಳುವವನ ಪಾಲಿಗೆ ರಾಮ ಸರ್ವತ್ರವ್ಯಾಪಿಯಾಗಲಾರ. ಆದರೆ ರಾಮನನ್ನು ಪರಮಾತ್ಮನೆಂದು ನಂಬುವವನಿಗೆ ಸರ್ವತ್ರವ್ಯಾಪಿ ರಾಮನ ತಂದೆಯೂ ಸರ್ವತ್ರವ್ಯಾಪಿಯಾಗಿ ತಂದೆ ಮಕ್ಕಳಿಬ್ಬರೂ ಒಂದಾಗುತ್ತಾರೆ. ಇದೆಲ್ಲ ಕಲ್ಪನೆಯ ಕಟ್ಟಡವೆಂದು ಹೇಳುವವರೂ ಇರಬಹುದು. "ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ। ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ॥" (ಯಾವ ಭಕ್ತನು ಯಾವ ರೂಪವನ್ನು ಶ್ರದ್ಧೆಯಿಂದ ಭಜಿಸುವನೊ ಅವನ ಆ ಶ್ರದ್ಧೆಯನ್ನು ನಾನು ಸ್ಥಿರಗೊಳಿಸುವೆನು) ಎಂಬ ವಾಕ್ಯದಿಂದ ನಾನು ಅವರಿಗೆ ಉತ್ತರ ಕೊಡುತ್ತೇನೆ. ಎಲ್ಲ ಧರ್ಮಗಳೂ ಮೂಲದಲ್ಲಿ ಒಂದೇ ಆಗಿದ್ದರೆ ನಾವು ಅವುಗಳನ್ನೆಲ್ಲ ಎರಕ ಹೊಯ್ಯಬೇಕು. ಇನ್ನು ಅವು ಬೇರೆ ಬೇರೆಯೆಂಬ ಭಾವನೆ ಬೇರೂರಿರುವದರಿಂದ ನಾವು ಒಬ್ಬರನ್ನೊಬ್ಬರು ಕೊಲ್ಲುತ್ತೇವೆ. ಧರ್ಮಕ್ಕೆ ರೋಸಿ ಹೋದಾಗ ನಾವು ನಾಸ್ತಿಕರಾಗುತ್ತೇವೆ. ಆಗ ನಮಗೆ ಕ್ಷುದ್ರ "ನಾನು" ಹೊರತು ಬೇರಾವದೂ—ದೇವರು ಸಹಿತ—ಇಲ್ಲದಾಗುತ್ತದೆ. ಆದರೆ ನಮಗೆ ನಿಜವಾದ ತಿಳುವಳಿಕೆ ಬಂದಾಗ ಈ ಕ್ಷುದ್ರ "ನಾನು" ಪೂರ್ಣ ಅಳಿದು ಹೋಗಿ ಎಲ್ಲವೂ ಪರಮಾತ್ಮಮಯವಾಗುತ್ತದೆ. ಆಗ ರಾಮನು ದಶರಥನ ಮಗ, ಸೀತೆಯ ಪತಿ, ಭರತ ಲಕ್ಷ್ಮಣರ ಅಣ್ಣ ಆಗಿದ್ದರೂ ಆಗಿಲ್ಲದಿದ್ದರೂ ಅವನು ಜನನ ಮರಣರಹಿತ ಅನಂತ ಪರಮಾತ್ಮನಾಗಿ ಭಾಸವಾಗುವನು. ಆದುದರಿಂದ ದಶರಥಪುತ್ರನಾದ ರಾಮನಲ್ಲಿ ಸೇರಿಕೊಳ್ಳಬರುವವರೆಲ್ಲ ಧನ್ಯರು. ಈ ರಾಮವಿಚಾರ ತರ್ಕಾತೀತವಾದುದು. ನನ್ನ ನಂಬಿಕೆಯನ್ನು ಓದುಗರಿಗೆ ವಿವರಿಸಲು ಮಾತ್ರ ನಾನಿಲ್ಲಿ ಪ್ರಯತ್ನಿಸುತ್ತೇನೆ.

ಹೊಸದಿಲ್ಲಿ — ಮೋ. ಕ. ಗಾಂಧಿ
೧೬—೯—೪೬ (ಹರಿಜನ ಸೇವಕದಿಂದ)

## ಟೀಕೆ ಟಿಪ್ಪಣೆಗಳು

(೭ನೇ ಪುಟದಿಂದ ಮುಂದರಿದುದು)

ಜನಸಾಮಾನ್ಯರಿಗೆ ಪ್ರಾರ್ಥನೆಯ ನಿಜ ಸ್ವರೂಪವಾದ ಆತ್ಮ ಪರೀಕ್ಷಣೆಯನ್ನು ಕಲಿಸುವದವಶ್ಯವಲ್ಲವೆ?

ಉತ್ತರ:— ನಾನು ನಡೆಸುತ್ತಿರುವ ಸಾಮೂಹಿಕ ಪೂಜೆ, ಜನಸಮೂಹ ಮಾಡುವ ನಿಜವಾದ ಪ್ರಾರ್ಥನೆಯೆಂದು ನನ್ನ ಅಭಿಪ್ರಾಯ. ಜನಸಮ್ಮರ್ದ ಕೂಡಿಸುವ ಭಕ್ತ ವಂಚಕನಲ್ಲ. ಅವನು ವಂಚಕನಾಗಿದ್ದರೆ ಪ್ರಾರ್ಥನೆ ಮೂಲದಲ್ಲಿಯೆ ದೋಷಪೂರ್ಣವಾಗುತ್ತಿದ್ದಿತು. ಇಲ್ಲಿಗೆ ಬರುತ್ತಿರುವ ಸ್ತ್ರೀಪುರುಷರು ಐಹಿಕ ಇಷ್ಟಾರ್ಥಗಳನ್ನು ಪಡೆಯಲು ಸಾಧನವಾದ ಸನಾತನ ಪ್ರಾರ್ಥನಾಮಂದಿರಕ್ಕೆ ಹೋಗುವದಿಲ್ಲ. ಅವರಲ್ಲಿ ಅನೇಕರಿಗೆ ಅದರ ಚಾಲಕನ ಪರಿಚಯವೇ ಇಲ್ಲ. ಅದುದರಿಂದ ಅವರು ಕೇವಲ ಪ್ರದರ್ಶನಕ್ಕೆಂದು ಬರುವದಿಲ್ಲೆಂದು ಗ್ರಹಿಸಬಹುದು. ಸಾಮೂಹಿಕ ಪ್ರಾರ್ಥನೆಯಿಂದ ಹೇಗೋ ಪುಣ್ಯ ಬರುವದೆಂಬ ಶ್ರದ್ಧೆಯಿಂದ ಅವರು ಬರುತ್ತಿರುವರು. ಅವರಲ್ಲ ಅನೇಕರು ಇಲ್ಲವೆ ಕೆಲವು ಜನರು ಅಲಕ್ಷಿಸುವರು ಇಲ್ಲವೆ ಲಕ್ಷಕೊಡದ ಸ್ಥಿತಿಯಲ್ಲಿರುವರೆಂಬದು ಬಹಳ ನಿಜ. ಅವರಿನ್ನೂ ಹೊಸಬರೆಂಬುದು ಇದು ವ್ಯಕ್ತಪಡಿಸುತ್ತದೆ. ಆ ಸಂಸ್ಥೆ ಇಲ್ಲವೆ ಲಕ್ಷಕೊಡಲು ಬೇಕಾದ ಸಾಮರ್ಥ್ಯವಿಲ್ಲದಿರುವಿಕೆ ವಂಚಕತನಕ್ಕೆ ಇಲ್ಲವೆ ಅಸತ್ಯಕ್ಕೆ ಸಾಕ್ಷಿಯಾಗವು. ಸಾವಧಾನವಿಲ್ಲದಿರುವಾಗ ಸಾವಧಾನ ಇದ್ದಂತೆ ನಟಿಸುವದು ವಂಚಕತನ. ತದ್ವಿರುದ್ಧವಾಗಿ ಸಾವಧಾನರಾಗುಳಿಯಲು ಅಸಮರ್ಥರಾದಾಗ ಏನು ಮಾಡಬೇಕೆಂದು ಅನೇಕರು ನನ್ನನ್ನು ಆಗಾಗ ಕೇಳಿದ್ದುಂಟು—

ಮೇಲಿನ ಪ್ರಶ್ನೆಯಲ್ಲಿ ಉಲ್ಲೇಖಿಸಿದ ಜೀಸಸನ ಮಾತು ಸಂಪೂರ್ಣವಾಗಿ ಅಪ್ರಸ್ತುತವಾಗಿದೆ. ವೈಯಕ್ತಿಕ ಪ್ರಾರ್ಥನೆ ಮತ್ತು ಅದರಲ್ಲಿ ಅಡಕವಾದ ಠಕ್ಕತನದ ಬಗ್ಗೆ ಹೇಳುವಾಗ ಜೀಸಸನು ಹಾಗೆ ಹೇಳಿದ್ದು. ಉಲ್ಲೇಖಿಸಲ್ಪಟ್ಟ ಶ್ಲೋಕದಲ್ಲಿ ಸಾಮೂಹಿಕ ಪ್ರಾರ್ಥನೆಯ ವಿರುದ್ಧ ಚಕಾರ ಶಬ್ದವಿಲ್ಲ. ವೈಯಕ್ತಿಕ ಪ್ರಾರ್ಥನೆ ಮಾಡದೆ ಸಾಮೂಹಿಕ ಪ್ರಾರ್ಥನೆ ಅಷ್ಟೊಂದು ಉಪಯುಕ್ತವಲ್ಲೆಂದು ನಾನು ಆಗಾಗ ಹೇಳಿರುವೆನು. ಸಾಮೂಹಿಕ ಪ್ರಾರ್ಥನೆ ಪರಿಣಾಮಕಾರಿಯಾದರೆ ವೈಯಕ್ತಿಕ ಪ್ರಾರ್ಥನೆಗೆ ಸಾಧಕವಾಗುತ್ತಿರುವಂತೆ ವೈಯಕ್ತಿಕ ಪ್ರಾರ್ಥನೆ ಸಾಮೂಹಿಕ ಪ್ರಾರ್ಥನೆಗೆ ಪೂರ್ವಪೀಠಿಕೆಯಂತಿದೆಂದು ನನ್ನ ಮತ. ಅಂತಃಪ್ರಾರ್ಥನೆಯು ಎಟ್ಟವನ್ನು ಮಾನವ ಮುಟ್ಟಿದ್ದಾದರೆ ಅವನು ಏಕಾಂತದಲ್ಲಿಯೂ ಸಮೂಹದಲ್ಲಿಯೂ ಯಾವಾಗಲೂ ಪ್ರಾರ್ಥಿಸುವನೆಂದು ಬೇರೆ ಶಬ್ದಗಳಲ್ಲಿ ಹೇಳಬಹುದು.

ಈ ಪ್ರಶ್ನೆಕಾರನ ಯೋಗಿ ಏನು ಮಾಡುವನು ಏನು ಮಾಡುವದಿಲ್ಲೆಂದು ನನಗೆ ತಿಳಿಯದು. ಜನಸಾಮಾನ್ಯರು ಅನಂತದಲ್ಲಿ ತಾದಾತ್ಮ್ಯ ಹೊಂದಾಗ ಸ್ವಾಭಾವಿಕವಾಗಿ ಆತ್ಮ ಪರೀಕ್ಷಣೆ ಮಾಡಿಕೊಳ್ಳುವರೆಂಬುದು ನನಗೆ ಗೊತ್ತು. ನಿಜವಾದ ಪ್ರಾರ್ಥನೆಯ ಧ್ಯೇಯವೇ ಅದು.

ಹೊಸದಿಲ್ಲಿ — ಮೋ. ಕ. ಗಾಂಧಿ

೧೪-೯-೪೬

## ಹೆಮ್ಮೆಯೋ ಹುಚ್ಚೋ ?

ಗುಜರಾಥವನ್ನು ಹೆಮ್ಮೆಯಿಂದ ನೋಡುವದು ಯಾರಿಗೆ ಸೇರದು? ಹುಚ್ಚೆಂದು ಪ್ರೀತಿಯಿಂದ ಕರೆಯುವದು ಕ್ಷಮ್ಯ. ವಿಷಾದದಿಂದ ನಾನೀ ವಾಕ್ಯಗಳನ್ನು ಬರೆಯುತ್ತಿರುವಾಗ ನನ್ನ ಕಣ್ಮುಂದೆ ಗುಜರಾಥದ ಹೆಮ್ಮೆಯ ಚಿತ್ರವಿರದೆ ಹುಚ್ಚುಚ್ಚಾರ ಚಿತ್ರವಿರುವದು.

ಶ್ರೀ ಪರೀಕ್ಷಿತಲಾಲರು ಹರಿಜನರ ಸೇವಕ. ಹಾಗೆಂದು ಗುಜರಾಥದ ಸೇವೆ ಮಾಡಬೇಕೆಂದು ಅವರ ಹೆಬ್ಬಯಕೆ. ಆದರೆ ಹುಚ್ಚುಚ್ಚಾರವನ್ನು ನೋಡಿ ಅವರು ಭಂಗಬಟ್ಟಿರುವರು. ಜೀವಂತ ಹರಿಜನರ ಬಗ್ಗೆ ನಾವು ಸುದ್ದಿ ಸಂಗತಿಗಳನ್ನು ಕೇಳುತ್ತಿರುವೆವು. ಆದರೆ ಪರೀಕ್ಷಿತಲಾಲರ ಕತೆಯಲ್ಲಿ ಮರಣ ಹೊಂದಿದ ಹರಿಜನರೂ ಅಸ್ಪೃಶ್ಯರೇ. ಸ್ಮಶಾನದಲ್ಲಿಯಾದರೂ ಮನುಷ್ಯ ಮನುಷ್ಯರಲ್ಲಿ ಭೇದವಿರತಕ್ಕದ್ದಲ್ಲ. ಮರಣ ಹೊಂದಿದ ದೇಹ ಬೂದಿಯಾಗಿ ಬಿಟ್ಟಿತೆಂದರೆ ಅಸ್ಪೃಶ್ಯತೆಯೆಲ್ಲ ಮಾಯವಾಗುವದು. ಹೀಗಿದ್ದರೂ ಹರಿಜನರಿಗೆ ಸಾರ್ವಜನಿಕ ಸ್ಮಶಾನದಲ್ಲಿ ಅವಕಾಶ ಸಿಕ್ಕಬಾರದೆ? ನವಸಾರಿಯಲ್ಲಿ ಸಾರ್ವಜನಿಕ ಸ್ಮಶಾನದಲ್ಲಿ ವೃದ್ಧ ಹರಿಜನನೊಬ್ಬನ ಅಂತ್ಯವಿಧಿಗೆ ಬಹಳ ಪ್ರಯತ್ನದ ನಂತರ ಮಹಾಜನರ ಅಪ್ಪಣೆಯನ್ನು ಪಡೆಯಲಾಯಿತು. ಮಹಾಜನರಿಗೆ ಇದೇನು ಉಪಕಾರದ ಮಾತಾಗಿರಲಿಲ್ಲ. ಹರಿಜನರಿಗೆ ಸಂತೋಷದ ಸಂಗತಿಯಾಗಿರಲಿಲ್ಲ. ಆದರೂ ಹಲವು ಸಲ ಅಲ್ಪೋಪಕಾರಕ್ಕಾಗಿಯೂ ನಾವು ಉಪಕಾರ ಪ್ರದರ್ಶಿಸಬೇಕಾಗುವದು. ಈ ಸಂದರ್ಭದಲ್ಲಿ ಮಾಡಿದ ಚಳವಳಿಗೆ ಯಶಸ್ಸು ಸಿಕ್ಕಿದ್ದು ಸಂತೋಷದ ಸಂಗತಿ.

ಎರಡನೆಯ ಉದಾಹರಣೆ ವಿಷಾದಮಿಶ್ರವಾಗಿದೆ. ಯಾವ ಹಳ್ಳಿಯಲ್ಲಿ ಈ ಘಟನೆ ಸಂಭವಿಸಿತೋ ಅದರ ಹೆಸರು ಪ್ರಸಿದ್ಧಿಸಬಯಸುವದಿಲ್ಲ. ದನಗಳಲ್ಲಿ ಬೇನೆ ಹಬ್ಬಿದರೂ ಅದಕ್ಕೆ ಬಡ ಹರಿಜನರೇ ಹೊಣೆಗಾರರೆಂಬ ಸಂಗತಿ ಅದರಲ್ಲಿಯ ನಿಂದ್ಯ ಭಾಗವಾಗಿದೆ. ಬೇನೆಯ ಪ್ರತ್ಯೇಕ ಕಾರಣಗಳೇನೆಂಬುದನ್ನು ವಿಚಾರಿಸುವ ಶ್ರಮವನ್ನೂ ಸವರ್ಣ ಹಿಂದುಗಳೆಂದು ಕರೆಯಿಸಿಕೊಳ್ಳುವವರು ತೆಗೆದುಕೊಳ್ಳುವುದಿಲ್ಲ. ಮಳೆಗಾಲದಲ್ಲಿ ಹುಲ್ಲು ವಿಪುಲವಾಗಿ ಬೆಳೆಯುತ್ತಿದೆ. ಬಗೆಬಗೆಯ ಹುಳ ಹುಪ್ಪಡಿಗಳು ಅದರಲ್ಲಿ ತುಂಬಿರುತ್ತವೆ. ಹಸಿವೆಯಿಂದ ಬಳಲುವ ದನಗಳು ಹಸಿ ಹುಲ್ಲನ್ನು ನೋಡಿದ ಕೂಡಲೆ ಹುಚ್ಚು ಹಿಡಿದಂತಾಗಿ ಗಬಗಬ ತಿನ್ನಹತ್ತುತ್ತವೆ. ಹುಳಹುಪ್ಪಡಿಗಳನ್ನು ನೋಡುವದಿಲ್ಲ. ಎಲ್ಲವನ್ನೂ ತಿನ್ನುತ್ತವೆ. ಇದರಿಂದ ಅವು ಬೇನೆಬಿದ್ದು ಸಾಯುವವೆಂಬುದರಲ್ಲಿ ಆಶ್ಚರ್ಯವೇನಿದೆ? ಬೇನೆಯ ಕಾರಣ ಸ್ಪಷ್ಟವೇ ಇದೆ. ಹರಿಜನರ ದನಗಳೇನು ಕಡಿಮೆ ಸಂಕಷ್ಟಕ್ಕೊಳಗಾಗುವದಿಲ್ಲ. ಆದರೂ ಈ ಪಿಡುಗಿಗೆ ಅವರೆ ಹೊಣೆಗಾರರೆಂದು ಪರಿಗಣಿಸಲಾಗುತ್ತಿದೆ. ಸವರ್ಣ ಹಿಂದುಗಳು ಅವರನ್ನು ಬಗೆಬಗೆಯಾಗಿ ಬೈದು ಗಾಯಗೊಳಿಸುತ್ತಾರೆ. ನನ್ನೆದುರಿಗಿದ್ದ ಪತ್ರದಲ್ಲಿಯ ಕರಳು ಕತ್ತರಿಸುವಂತಹ ಕತೆಯ ಸಾರವಿದು. ಆಯಾ ಹಳ್ಳಿಗರಿಗೆ ನನ್ನೀ ಶಬ್ದಗಳು ಮುಟ್ಟುವವೆಂದು ನಾನು ಬಯಸುತ್ತೇನೆ.

ಇದೀಗ ಸುಧಾರಕರ ಕೈಯಲ್ಲಿಯೆ ಆಡಳಿತಾಧಿಕಾರವಿದೆ. ಅಧಿಕಾರಿಗಳು ಪ್ರಯತ್ನಿಸಿದ್ದಾದರೆ ಹಳ್ಳಿಗರ ಇಂಥ ಭೀಕರ ಅಜ್ಞಾನ ಬಹುಮಟ್ಟಿಗೆ ಇಲ್ಲದಂತಾಗಬಹುದು. ಮಹಾಜನರು ತಮ್ಮ ಅಂಧ ವಿಶ್ವಾಸವನ್ನು ಬಿಟ್ಟುಗೊಟ್ಟು ಸರಕಾರದವರು ಮತ್ತು ಹರಿಜನ ಕಾರ್ಯಕರ್ತರು ತಮ್ಮ ಕಾರ್ಯಮಾಡಿದರೆ ಹಾಗು ಹರಿಜನರು ತಮ್ಮ ಗಾಢನಿದ್ರೆಯಿಂದೆಚ್ಚತ್ತರೆ ಇಂಥ ಭಯಾನಕ ಪಾಪದಿಂದ ಗುಜರಾಥವನ್ನು ಮುಕ್ತಮಾಡಬಹುದಾಗಿದೆ.

ಹೊಸದಿಲ್ಲಿ — ಮೋ. ಕ. ಗಾಂಧಿ

೧೪—೯—೪೬ (ಹರಿಜನ ಬಂಧುವಿನಿಂದ)

## ಅನಧಿಕೃತ ಖಾದಿಯೂ ಗಿರಣಿ ಬಟ್ಟೆಯೂ

ಒಬ್ಬ ಗುಜರಾಥಿ ಗೆಳೆಯ ಬರೆಯುತ್ತಾನೆ: “ಅನೇಕ ರಾಷ್ಟ್ರೀಯ ಸಂಸ್ಥೆಗಳು ತಮ್ಮ ಕಾರ್ಯಕರ್ತರು ಖಾದಿಯ ಉಡುಪನ್ನೇ ಧರಿಸಬೇಕೆಂದು ವಿಧಿಸುವವು ಮಾತ್ರವಲ್ಲದೆ ತಮ್ಮ ಪುಸ್ತಕಗಳು ಖಾದಿಯ ಹೊದಿಕೆಯಿಂದ ಕೂಡಿರಬೇಕೆಂದು ಅಪೇಕ್ಷಿಸುತ್ತವೆ. ಆದರೆ ಅಧಿಕೃತ ಖಾದಿಯನ್ನು ನಿರ್ದಿಷ್ಟ ನೂಲು ಕೊಟ್ಟರೆ ಮಾತ್ರ ಖಾದಿ ಭಂಡಾರಗಳಿಂದ ಪಡೆಯಬಹುದಾದ ಕಾರಣ ಅವು ಸ್ವಾಭಾವಿಕವಾಗಿ ಅನಧಿಕೃತ ಖಾದಿಗೆ ಮೊರೆಹೋಗುತ್ತವೆ. ಇದು ಸರಿಯೆ? ಅನಧಿಕೃತ ಖಾದಿಗಿಂತ ಗಿರಣಿ ಬಟ್ಟೆಯೇ ವಾಸಿಯಲ್ಲವೆ? ಅನಧಿಕೃತ ಅಂಗಡಿಗಳಿಂದ ಕೊಳ್ಳುವದರಲ್ಲಿ ಪರಿಣಮಿಸುವ ಖಾದೀ ಧಾರಣೆಯ ಒತ್ತಾಯ ಬರಿ ಬಯಲಾಡಂಬರವಲ್ಲವೆ?”

ಬೇರೆ ಕೆಲವು ವಸ್ತುಗಳಂತೆ ಖಾದಿಯ ಕೊರತೆಯೂ ಇರುವ ಸಮಯದಲ್ಲಿ ಪುಸ್ತಕದ ಹೊದಿಕೆ ಮೊದಲಾದುದಕ್ಕೆ ಖಾದಿಯೇ ಆಗಬೇಕೆಂದು ಛಲ ಹಿಡಿಯುವ ದಾರಿ ಸರಿಯಲ್ಲ. ಖಾದಿ ಸಮೃದ್ಧವಾಗಿದ್ದಾಗ ಇಂಥ ಎಲ್ಲ ಕೆಲಸಗಳಿಗಾಗಿ ಅದನ್ನು ಬಳಸಬೇಕೆಂದು ಸೂಚಿಸಿದವನು ನಾನೆ. ೧೯೨೧ ರಲ್ಲಿ ಅಹಮದಾಬಾದದಲ್ಲಿ ಇಡಿ ಕಾಂಗ್ರೆಸ್ ಶಿಬಿರವೇ ಖಾದಿಮಯವಾಗಿತ್ತು. ಇಂದು ಅಂಥ ಪ್ರಯತ್ನ ಮಾಡಿದರೆ ಅದು ಹುಚ್ಚುತನವೆನಿಸೀತು. ಕಾಲಗತಿಯೂ ಪರಿಸ್ಥಿತಿಯೂ ನಮ್ಮ ಪದ್ಧತಿಗಳನ್ನು ಬದಲಿಸುತ್ತವೆ.

ಆದರೆ ಅನಧಿಕೃತ ಖಾದಿಗಿಂತ ಗಿರಣಿ ಬಟ್ಟೆ ಲೇಸೆಂಬ ಈ ಪತ್ರಲೇಖಕನ ವಾದ ಮಾತ್ರ ನನಗೆ ಅರ್ಥವಾಗುವದಿಲ್ಲ. ಅನಧಿಕೃತ ಖಾದಿಯೆಂದರೇನು? ಅದು ಅನಧಿಕೃತವಾಗಿದ್ದರೂ ಕೈನೂಲು-ಕೈಮಗ್ಗದ ಬಟ್ಟೆಯಲ್ಲವೆ? ಅದರಲ್ಲ ಮೋಸವಿರಬಹುದೆಂಬ ಮಾತು ಬೇರೆ. ಅಧಿಕೃತ ಖಾದಿಯಲ್ಲಿ ಕೂಡ ಹದಿನಾರಾಣೆ ನಿರ್ದುಷ್ಟತೆಯಿದೆಯೆಂದು ಚರಖಾ ಸಂಘದವರು ಭರವಸೆ ಕೊಡಲಾರರು. ಜಗತ್ತಿನಲ್ಲಿ ಮೋಸಕ್ಕೆ ಸಿಲುಕದ ವಸ್ತು ಯಾವದೂ ಇಲ್ಲ. ಇದು ಯುಗಯುಗಾಂತರಗಳಿಂದಲೂ ಬಂದ ನಿಜವಾದ ಮಾತು. ‘ಅನಧಿಕೃತ ಖಾದಿಯಲ್ಲಿರುವ ದೋಷಗಳು ಸರ್ವವಿದಿತವಾಗಿವೆ. ಅದರಲ್ಲಿ ನೂಲುವವರಿಗಾಗಲಿ ನೇಯುವವರಿಗಾಗಿ ನಿರ್ದಿಷ್ಟ ಕೂಲಿಯಿಲ್ಲ. ಅದನ್ನು ಮಾರುವವರು ಮನಬಂದಷ್ಟು ಲಾಭ ಹೊಡೆಯುತ್ತಾರೆ. ಎಷ್ಟೋ ವೇಳೆ ಚರಖಾ ಸಂಘದ ಭಂಡಾರಗಳನ್ನು ತೊಂದರೆಗೀಡು ಮಾಡುವ ಗೋಸುಗವೇ ಜನರು ಅನಧಿಕೃತ ಖಾದಿ ಅಂಗಡಿಗಳನ್ನು ತೆರೆಯುತ್ತಾರೆ. ಹೀಗಿದ್ದರೂ ಕೃತಕವಿಲ್ಲದ ಸಂದರ್ಭದಲ್ಲೆಲ್ಲ ಕೈನೂಲು ಕೈಮಗ್ಗದ ಅರಿವೆಯನ್ನೆಲ್ಲ ಖಾದಿಯೆಂದೇ ಕರೆಯಬೇಕು. ಒಬ್ಬನು ತಾನೇ ನೂತು ತಾನೇ ತನ್ನ ಉಪಯೋಗಕ್ಕಾಗಿ ನೇಯ್ದ ಬಟ್ಟೆ ಶುದ್ಧ ಕಾಯಿದೆದೃಷ್ಟಿಯಿಂದ ಅಧಿಕೃತ ಖಾದಿಯಲ್ಲವಾದರೂ ಶುದ್ಧ ತಮ್ಮ ಪ್ರತಿಯ ಖಾದಿಯದು. ಅಂಥ ಮನುಷ್ಯನು ತನ್ನ ಕೈಯಿಂದ ಮಾಡಿದ ಬಟ್ಟೆಯ ಬದಲು ಗಿರಣಿ ಬಟ್ಟೆಯನ್ನು ತೊಡಹೋದರೆ ಅದಕ್ಕಿಂತ ದೊಡ್ಡ ಪಾಪ ಬೇರಿಲ್ಲ.

ಇದರ ಮಥಿತಾರ್ಥವೆಂದರೆ, ಗಿರಣಿ ಬಟ್ಟೆಯ ಬಹಿಷ್ಕಾರವನ್ನು ನಾವು ಯಥಾಸಾಂಗವಾಗಿ ಸಾಗಿಸಬೇಕು. ಅನಧಿಕೃತ ಖಾದಿಯನ್ನು ಸಾಧ್ಯವಿದ್ದ ಮಟ್ಟಿಗೆ ಬಿಟ್ಟುಬಿಡಬೇಕು. ಆದರೆ ಗಿರಣಿ ಬಟ್ಟೆ ಮತ್ತು ಅನಧಿಕೃತ ಕೈನೂಲಿನ ಖಾದಿ ಇವುಗಳಲ್ಲೊಂದನ್ನು ಆರಿಸಬೇಕಾದ ಪಾಳಿ ಬಂದಾಗ ಅದು ಶುದ್ಧ ಖಾದಿಯಾಗಿದ್ದರೆ ಅನಧಿಕೃತ ಖಾದಿಯನ್ನೇ ಆರಿಸಬೇಕು. ಒಬ್ಬನ ಸ್ವಹಸ್ತದ ಶ್ರಮದಿಂದ ಹುಟ್ಟಿದ ಖಾದಿಯನ್ನು ನೀವು ಬೇಕಾದರೆ ಅನಧಿಕೃತವೆಂದು ಧಿಕ್ಕರಿಸಬಹುದು. ಆದರೆ ಅದು ಅಧಿಕೃತ ಖಾದಿಗಿಂತಲೂ ಪರಿಶುದ್ಧವಾದ ಒಡವೆಯೆಂಬ ಸತ್ಯ ಬೇರೆ ಸುಳ್ಳಾಗದು. ಇನ್ನು ಎಲ್ಲರೂ ತಮ್ಮ ಉಪಯೋಗಕ್ಕೆ ಬೇಕಾದಷ್ಟು ಅರಿವೆಯನ್ನು ನೂತು ನೇಯ್ದುಕೊಂಡರೆ ಚರಖಾ ಸಂಘವೆಂಬದು ಬೇಕಾದರೂ ಏಕೆ? ಭೂಮ್ಯಾಕಾಶಗಳೆರಡೂ ಆಗ ಚರಖಾ ಸಂಘದ ಜಯಘೋಷಣೆಗಳಿಂದ ಪ್ರತಿಧ್ವನಿಸಬಹುದು.

(ಹರಿಜನ ಬಂಧುವಿನಿಂದ)

ಹೊಸದಿಲ್ಲಿ —ಮೋ. ಕ. ಗಾಂ.

೧೩-೯-೪೬

## ಚರಖಾದ ಶಾಂತಿ

ಶ್ರೀ ವಿಚಿತ್ರ ನಾರಾಯಣರು ತಮ್ಮ ಡಾಕ್ಟರ ಗೆಳೆಯರೊಬ್ಬರ ಒಂದು ಪತ್ರವನ್ನು ಗಾಂಧೀಜಿಗೆ ಕಳಿಸಿದ್ದಾರೆ. ಡಾಕ್ಟರ ಭೂಪಾಲಸಿಂಗರು ತಮ್ಮ ಕಣ್ಣು ತೀರ ಮಂದವಾಗಿರುವದರಿಂದ ಈಗ ವೃತ್ತಿಯನ್ನು ಸಾಗಿಸುತ್ತಿಲ್ಲ. ಅವರು ನಿರಂತರವಾಗಿ ಬಡವರ ಸೇವೆ ಮಾಡಿದ್ದಾರೆ. ಈ ಕೆಳಗೆ ಕೊಟ್ಟ ಅವರ ಪತ್ರದ ಸಾರ ಕುತೂಹಲಪ್ರದವಾಗಿದೆ.

ನರವಿಕಾರಗಳ ಶುಶ್ರೂಷೆಯಲ್ಲಿ ಚರಖಾ ಬಹಳ ಉಪಯುಕ್ತವಾಗಿದೆಯೆಂದು ತಾವು ಕಂಡುಹಿಡಿದದ್ದಾಗಿ ಅವರು ಉಲ್ಲೇಖಿಸಿದ್ದಾರೆ. ಅಂಥ ವಿಕಾರಗಳಿಂದ ಬಳಲುತ್ತಿರುವವರಿಗೆ ಸಾಮಾನ್ಯವಾಗಿ ಏಕಾಗ್ರತೆಯ ಸಾಮರ್ಥ್ಯವಿಲ್ಲದಿರುವದರಿಂದ ಅವರ ಚಿತ್ತ ಚಂಚಲವಾಗಿರುತ್ತದೆ. ಯಾವ ಕೆಲಸಮಾಡುವ ಇಚ್ಛೆಯೂ ಅವರಿಗಿರುವದಿಲ್ಲ. ಇಂಥ ಸಂದರ್ಭಗಳಲ್ಲಿ ರಾಟಿಯೇ ಔಷಧಗಳಿಗಿಂತ ಹೆಚ್ಚು ಗುಣಕಾರಿಯಾಗಿದೆಯೆಂದು ಈ ಡಾಕ್ಟರರ ಅನುಭವ. ಚರಖಾದ ನಿನಾದದಲ್ಲಿ ಚಿತ್ತವನ್ನು ಶಾಂತಗೊಳಿಸುವ ಶಕ್ತಿಯಿದೆ. ನೂಲುವದಕ್ಕೆ ಏಕಾಗ್ರತೆ ಬೇಕಾಗುವದು. ರೋಗಿಗಳು ತಮ್ಮ ಶ್ರಮದ ಫಲವನ್ನು ಕಂಡು ಆತ್ಮವಿಶ್ವಾಸವನ್ನು ಮರಳಿ ಪಡೆಯುವರು. ಬೌದ್ಧಿಕ ಸುಧಾರಣೆಯಿಂದ ದೇಹದ ಮೇಲೂ ಹಿತಾವಹ ಪರಿಣಾಮವಾಗುತ್ತದೆ. ಪತ್ರಲೇಖಕರ ಅಭಿಪ್ರಾಯದಲ್ಲಿ ಉನ್ಮಾದ, ವಾತವಿಕಾರ (Neurasthenia) ಮೊದಲಾದ ರೋಗಗಳು, ನೂಲುವದೇ ಮೊದಲಾದ ಆರೋಗ್ಯದಾಯಕ ಕರ್ಮಗಳು ದುರ್ಲಕ್ಷಕ್ಕೊಳಗಾದ ನಗರ ಪ್ರದೇಶಗಳಲ್ಲಿ ಹೆಚ್ಚು ಹಬ್ಬಿರುತ್ತವೆ. ಹಳ್ಳಿಗಳಲ್ಲಿ ನರವಿಕಾರಗಳ ಹಬ್ಬುಗೆ ಎಷ್ಟೋ ಕಡಿಮೆ.

ಚರಖಾದಲ್ಲಿ ಡಾ. ಭೂಪಾಲ ಸಿಂಗರಿಗಿರುವ ವಿಶ್ವಾಸ ಬಲುದಿನಗಳದು. ಡಾಕ್ಟರಿ ನಡೆಸುತ್ತಿದ್ದ ಕಾಲದಲ್ಲಿ ಅವರು ಎಷ್ಟೋ ವೇಳೆ ರೋಗಿಗಳಿಂದ ಶುಲ್ಕದ ಬದಲು ನೂಲನ್ನು ತೆಗೆದುಕೊಳ್ಳುತ್ತಿದ್ದುದುಂಟು. (ಹರಿಜನಸೇವಕದಿಂದ)

ಹೊಸದಿಲ್ಲಿ —ಅ. ಕಾ.

೧೬—೯—೪೬

## ವಾರದ ಪತ್ರ

(೯ನೇ ಪುಟದಿಂದ ಬಂದುದು)

ವವರ ಪರಿಶುದ್ಧ ಹಸ್ತದಿಂದ ದೊಡ್ಡ ಚಮತ್ಕಾರವೇ ಕೈಗೂಡಬಲ್ಲದು. ನೀವೆಲ್ಲರೂ ಅದಕ್ಕೆ ನೆರವಾಗಬಲ್ಲಿರಿ. ಖಾದಿ ಒರಟಾಗಿದ್ದರೂ ಅದರಲ್ಲಿರುವ ಸೌಂದರ್ಯವನ್ನು ಕಂಡುಹಿಡಿಯಬೇಕಾದರೆ, ಗಿರಣಿ ಬಟ್ಟೆಯ ಕವಡು ಮೆಲಿಸುತನಕ್ಕೆ ಮರುಳಾಗದಿರಬೇಕಾದರೆ ನಿಮ್ಮಲ್ಲಿ ತಿಳಿವಳಿಕೆಯ ಹೃದಯ, ಕಾಣುವ ಕಣ್ಣು ಇರಬೇಕು. ಗಿರಣಿ ಬಟ್ಟೆ ನಿಮ್ಮ ನಿಜವಾದ ಮಾನವನ್ನು ಎಂದೂ ಮುಚ್ಚಲಾರದು. ನಿಮ್ಮ ಮಾನವನ್ನು ಮುಚ್ಚಿ ಹಸಿವೆಯನ್ನು ಓಡಿಸುವ ಒಂದೇ ಹಾದಿಯೆಂದರೆ ನಿಮ್ಮ ಆಹಾರವನ್ನು ನೀವೇ ಬೆಳೆದು ನಿಮ್ಮ ಬಟ್ಟೆಯನ್ನು ನೀವೇ ಮಾಡಿಕೊಳ್ಳುವದು. ಈ ಸುಖಮಯ ಪರಿಪೂರ್ಣತೆಯನ್ನು ನಾವು ಸಾಧಿಸಿಕೊಳ್ಳಬಲ್ಲೆವಾದರೆ ಇಡೀ ಜಗತ್ತಿನ ಕಣ್ಣುಗಳೇ ಹಿಂದುಸ್ತಾನದ ಕಡೆಗೆ ಹೊರಳದಿರವು. ಇಂದು ಈ ಭೂಮಿಯಲ್ಲಿ ಎಲ್ಲವೂ ತಪ್ಪು ಗಂಟಾಗುತ್ತಿರುವಂತೆ ತೋರುವದು. ಮುಂಬಯಿಯಲ್ಲಿ ತಲೆಗೆಟ್ಟ ಕೆಲವರು ಗುಂಡುಹಾರಿಸಿ ಅನೇಕನಿರಪರಾಧಿಗಳ ಮರಣಕ್ಕೆ ಕಾರಣರಾದ ಸುದ್ದಿ ಪತ್ರಿಕೆಗಳಲ್ಲಿ ಬಂದಿದೆ. ಈ ಲಜ್ಜಾವಹವಾದ ದುಷ್ಕರ್ಮದ ಸುದ್ದಿ ಆಕಾಶವಾಣಿಯಿಂದ ಜಗತ್ತಿನಲ್ಲೆಲ್ಲ ಹಬ್ಬಿರಬಹುದು. ನಾವು ಇದಕ್ಕಾಗಿ ದುಃಖದಿಂದ ತಲೆತಗ್ಗಿಸಬೇಕು.” “ಆದರೆ,” ಗಾಂಧೀಜಿ ಉಪಸಂಹರಿಸುತ್ತ ನುಡಿದರು, “ಆದರೆ ನೀವು ನನ್ನ ಮಾತು ಕೇಳಿದರೆ ಹಿಂದುಸ್ತಾನದಲ್ಲಿ ಎಲ್ಲವೂ ಸರಿಹೋಗುವದು. ಎಲ್ಲರೂ ತಮ್ಮ ಹೃದಯವನ್ನು ಜಳಜಳಮಾಡಿ ತಾವು ಹಿಂದೀಯರೆಂದು ಭಾವಿಸಿಕೊಂಡರೆ ಅವರು ಚರಖಾದ ಪಾಠವನ್ನು ಯಶಸ್ವಿಯಾಗಿ ಕಲಿತಂತಾಗುವದು.”

ಅನೇಗ ಸ್ಫೂರ್ತಿಗಳಿಂದ ತುಂಬಿ ತುಳುಕುವ ಲಿಖಿತ ಹಿಂದುಸ್ತಾನಿ ಸಂದೇಶದಲ್ಲಿ ಅವರು ಸೋಮವಾರ ದಿನ ಹೇಳಿದ್ದು: “ಕಾರ್ಯತತ್ಪರವಾದ ಚರಖಾ ತರಗತಿಯ ಮುಂದೆ ನನಗೆ ಎಲ್ಲವೂ ನೀರಸ, ನಿರ್ಜೀವವಾಗಿ ಕಾಣಿಸುತ್ತದೆ. ಅಲ್ಲಿ ತೆಗೆಯುತ್ತಿರುವ ಪ್ರತಿಯೊಂದು ನೂಲಿನ ಎಳೆಯಲ್ಲಿಯೂ ನರ್ತಿಸುತ್ತಿರುವ ನನ್ನ ರಾಮನನ್ನು ನೋಡುತ್ತೇನೆ. ನಾನು ಅದರಲ್ಲಿ ಸ್ವರಾಜ್ಯವನ್ನು ಕಾಣುತ್ತಿದ್ದೇನೆ. ೪೦ ಕೋಟಿ ಕೈಗಳು ನೂತ ನೂಲಿನ ಶಕ್ತಿಯನ್ನು ಕಲ್ಪಿಸಿಕೊಂಡಾಗ ನನ್ನ ಹೃದಯ ಅನಿರ್ವಚನೀಯ ಆನಂದದಿಂದ ತುಂಬಿಲವಾಗುವದು. ‘ಓ! ಆದರೆ ೨೦ ಕೋಟಿ ಹಿಂದೀಯರು ನೂಲಬೇಕಲ್ಲ?’ ಎಂದು ನೀವು ಕೇಳಬಹುದು. ಅಂಥ ಸಂಭಾವ್ಯತೆಯನ್ನು ನಂಬಲೊಪ್ಪದೆ ಹೋದರೆ ನಾವು ನಮ್ಮ ಅಜ್ಞಾನವನ್ನೂ ಅಶ್ರದ್ಧೆಯನ್ನೂ ಪ್ರದರ್ಶಿಸಿದಂತಾಗದೆ? ಜನಸಂಖ್ಯೆಯಲ್ಲಿ ಅರೆವಾಸಿ ಜನರು ದಿನಕ್ಕೊಂದು ತಾಸು ನೂಲು ತೆಗೆಯುವರೆಂದು ನಿರೀಕ್ಷಿಸುವದು ಅಷ್ಟು ಅಸಾಧ್ಯವೆ? ಮಾತೃಭೂಮಿಗಾಗಿ ನಾವು ಇಷ್ಟಾದರೂ ತ್ಯಾಗ ಮಾಡಲಾರೆವಾದರೆ ನಮ್ಮ ದೇಶಪ್ರೇಮಕ್ಕೆ ಏನು ಬೆಲೆ?”

ಹೊಸದಿಲ್ಲಿ —ಪ್ಯಾರೇಲಾಲ

೧೬ ಸಪ್ಟೆಂಬರ ೧೯೪೬



# ಕ ರ್ನಾ ಟ ಕ

### ಧಾರವಾಡ

ಮುಂಬಯಿ ಮುಖ್ಯ ಮಂತ್ರಿಗಳಾದ ಶ್ರೀ ಖೇರರು ಮತ್ತು ಆರೋಗ್ಯ ಮಂತ್ರಿಗಳಾದ ಡಾ. ಗಿಲ್ಡರರು ಧಾರವಾಡಕ್ಕೆ ಬಂದಾಗ ಅವರಿಗೆ ಮಾನಪತ್ರ ಸಮರ್ಪಿಸಬೇಕೆಂದೂ ನೀರಸಾ[illegible] ಯೋಜನೆ ಬಗ್ಗೆ ಒಂದು ಶಿಷ್ಟಮಂಡಳ ಕಳಿಸಬೇಕೆಂದೂ ಧಾರವಾಡ ನಗರಸಭೆಯವರು ನಿರ್ಣಯಿಸಿರುವದಾಗಿ ತಿಳಿಯುತ್ತದೆ.

ಕರ್ನಾಟಕ ವಣಿಕ್ ಸಂಘದ ಸರ್ವಸಾಧಾರಣ ಸಭೆ ಗದುಗಿನಲ್ಲಿ ಸೇರಿ ಮಾರಾಟಕರವನ್ನು ವಿರೋಧಿಸುವ ಗೊತ್ತುವಳಿ ಸ್ವೀಕರಿಸಲಾಯಿತು.

ಧಾರವಾಡ ಜಿಲ್ಲಾ ಕಾಂಗ್ರೆಸ್ ಸಿವಿಕ್ ಬೋರ್ಡಿನ ಸಭೆ ಸೇರಿ ಬರುವ ನವಂಬರದಲ್ಲಿ ಜರಗಲಿರುವ ಜಿಲ್ಹಾ ಲೋಕಲ್‌ಬೋರ್ಡ ಚುನಾವಣೆಗೆ ಕಾಂಗ್ರೆಸ್ಸಿನ ಹುರಿಯಾಳುಗಳನ್ನಾರಿಸಲಾಯಿತು.

ಹುಬ್ಬಳ್ಳಿ ಮುನಸಿಪಾಲ್ಟಿಯವರು ೩-೪ ಮತ್ತು ೫ ನೇ ವಾರ್ಡುಗಳಲ್ಲಿ ಹೆಣ್ಣುಮಕ್ಕಳಿಗೆ ಒತ್ತಾಯದ ಪ್ರಾಥಮಿಕ ಶಿಕ್ಷಣವನ್ನು ಇದೇ ಅಗಸ್ಟ ೨೮ ರಿಂದ ಪ್ರಾರಂಭಿಸುವರು. ಇದಕ್ಕೆ ಮುಂಬಯಿ ಸರಕಾರದ ಮನ್ನಣೆ ದೊರೆತಿದೆ.

ಧಾರವಾಡ ಜಿಲ್ಹಾ ೬ ನೇ ಸಾಹಿತ್ಯ ಸಮ್ಮೇಲನ ಅಕ್ಟೋಬರ ೨೭—೨೮—೨೯ ಕ್ಕೆ ಹುಬ್ಬಳ್ಳಿಯಲ್ಲಿ ಶ್ರೀ ಅ. ನ. ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಜರಗುವದು.

ಮುಂಬಯಿ ಸರಕಾರದವರು ಕರ್ನಾಟಕದಲ್ಲಿ ಒಂದು ವೈದ್ಯಕೀಯ ಕಾಲೇಜ ಸ್ಥಾಪಿಸಬೇಕು. ಹುಬ್ಬಳ್ಳಿಯು ಎಲ್ಲ ದೃಷ್ಟಿಯಿಂದ ಅದಕ್ಕೆ ಅನುಕೂಲ ಸ್ಥಳವಾದ್ದರಿಂದ ಹುಬ್ಬಳ್ಳಿಯಲ್ಲಿಯೆ ಅದನ್ನು ಸ್ಥಾಪಿಸಬೇಕೆಂದು ನಗರಾಧ್ಯಕ್ಷ ಶ್ರೀ ಬೆಂಡಿಗೇರಿಯವರ ಅಧ್ಯಕ್ಷತೆಯಲ್ಲಿ ಕೂಡಿದ್ದ ನಗರ ಪ್ರಮುಖರ ಸಭೆಯಲ್ಲಿ ನಿರ್ಣಯಿಸಲಾಯಿತು.

ಸಜ್ಜಿ, ಸಾವಿ, ನವಣೆ, ರಾಗಿಗಳನ್ನು ಮತ್ತು ಅವುಗಳ ಹಿಟ್ಟನ್ನು ಹುಬ್ಬಳ್ಳಿ ಧಾರವಾಡ ಗದಗ ರಾಣೇಬಿನ್ನೂರ ಹಾಗು ಹಾವೇರಿ ಸೀದಾ ಭಾಗಗಳಲ್ಲಿ ಸಪ್ಟಂಬರ ೧ ರಿಂದ ಸೀದಾ ಪದಾರ್ಥಗಳೆಂದು ಮುಂಬಯಿ ಸರಕಾರದವರು ಸಾರಿದ್ದಾರೆ. ಇದರಂತೆ ಗೋವಿನ ಜೋಳ, ಹಿಟ್ಟು ಸಜ್ಜಿಗೆ ರವಾ ಮೈದಾ ಹಾಗೂ ಆಟಾ ಇವುಗಳೂ ಸೀದಾ ಪದಾರ್ಥಗಳೆಂದು ಸಾರಲಾಗಿದೆ.

### ಬೆಳಗಾವಿ

ಪಲ್ಪ ಹಾಗು ಕೃತ್ರಿಮ ರೇಶಿಮೆ ತಯಾರಿಸುವ ಸಂಬಂಧದಲ್ಲಿ ಬೆಳಗಾವಿಯ ಡಾ. ತೆಂಡೂಲಕರರು ಸಿದ್ಧಪಡಿಸಿದ ಯೋಜನೆಯನ್ನು ಪರೀಕ್ಷಿಸಿ ಸರಕಾರಕ್ಕೆ ಆ ಬಗ್ಗೆ ಸಲಹೆ ಕೊಡಲು ಮುಂಬಯಿ ಸರಕಾರದವರು ಸರ್ ಅರ್ದೇಶೀರ ದಲಾಲರ ಅಧ್ಯಕ್ಷತೆಯಲ್ಲಿ ಡಾ. ನಾಝಿರ ಅಹಮ್ಮದ, ಚಂದೂಲಾಲ ಪರೇಖ ಹಾಗು ಔದ್ಯೋಗಿಕ ಖಾತೆಯ ಡಾಯರೆಕ್ಟರರ ಒಂದು ಮಂಡಳವನ್ನು ನಿಯಮಿಸಿರುವರು.

ಬೆಳಗಾವಿಯಲ್ಲಿ ಅನಂತಶಯನ ಬೀದಿಯಲ್ಲಿ ಜಿಲ್ಹಾ ರೈತ ಕಚೇರಿ ತೆರೆಯಲಾಗಿದೆ. ಇನ್ನು ಮುಂದೆ ಯಾವತ್ತೂ ರೈತ ಕಾರ್ಯಕರ್ತರು ರೈತರ ಸಂಘಟನೆ ಹಾಗು ದಿನದ ಅಡಚಣೆಗಳನ್ನು ಬಗೆಹರಿಸಿಕೊಳ್ಳುವ ವಿಚಾರಕ್ಕಾಗಿ ಈ ಕಚೇರಿಯೊಡನೆ ಪತ್ರವ್ಯವಹಾರ ಮಾಡಬೇಕೆಂದು ಮುಂತಾಗಿ ಕಾರ್ಯದರ್ಶಿ ತಲ್ಲೂರ ರಾಯನಗೌಡರು ಪ್ರಕಟಿಸುತ್ತಾರೆ.

ಮುಂಗಾರಿ ಬೆಳೆಗಳಿಗೆ ಆಗುವ ಮಿಡಚಿ ಉಪದ್ರವ ನಿವಾರಣೆಗೆ ಸವದತ್ತಿ ಜಿಟ್ಟಿ ಕಾಮಗಾರರು ತಗಡಿನ ಮೇಲೆ ಡಾಂಬರು ಹಚ್ಚಿ ಮಿಡಚಿ ನಾಶ ಮಾಡುವದನ್ನು ತೋರಿಸಿಕೊಟ್ಟಿದ್ದು ರೈತರು ಈಗಾಗಲೆ ೩೫೦—೪೦೦ ಎಕರೆ ಭೂಮಿಯಲ್ಲಿಯ ಮಿಡಚಿಗಳನ್ನು ನಾಶ ಮಾಡಿದ್ದಾರೆ.

ಮುಂಬಯಿಯ ಎ. ಡಿ. ಶ್ರಾಫ ಎಂಬವರು ಬೆಳಗಾವಿಯ ಶ್ರೀ ಅಜಗಾಂವಕರರನ್ನು ಮೋಸಗೊಳಿಸಿ ೬೦೦೦ ರೂಪಾಯಿ ಅಪಹರಿಸಲೆತ್ನಿಸಿದರೆಂದು ಪೋಲೀಸರು ಅವರನ್ನು ಬಂಧಿಸಿದ್ದಾರೆ. ಶ್ರಾಫರಿಗೆ ೬೦೦೦ ರೂ. ಗಳನ್ನು ಕೊಡಿರೆಂದು ವಿನಂತಿಸುವ ಪಾಟಣೇಕರರ ಹೆಸರಿನ ತಂತಿಯನ್ನು ಅಜಗಾಂವಕರರಿಗೆ ತೋರಿಸಿ ರೂಪಾಯಿ ಕೊಡಿರೆಂದು ಕೇಳಿದರು. ಆದರೆ ಪಾಟಣೇಕರರು ಇನ್ನೂ ಮುಂಬಯಿ ಮುಟ್ಟಿರಲಿಕ್ಕಿಲ್ಲ. ಇಷ್ಟರಲ್ಲಿ ತಂತಿ ಹೇಗೆ ಬಂದಿತೆಂದು ಸಂಶಯ ಬಂದದ್ದರಿಂದ ಅಜಗಾಂವಕರರು ಪೋಲೀಸರಿಗೆ ತಿಳಿಸಿದರು. ಪೋಲೀಸರು ಶ್ರಾಫರನ್ನು ಬಂಧಿಸಿದರು.

### ವಿಜಾಪುರ

ಬಾಗಲಕೋಟೆಯ ಮಕ್ಕಳ ವಿದ್ಯಾ ಮಂದಿರದವರು ಗಜಾನನೋತ್ಸವ ಕಾಲದಲ್ಲಿ ಶ್ರೀ ಸಕ್ರಿ ವೆಂಕಪ್ಪನವರನ್ನು ಅತಿಥಿಗಳನ್ನಾಗಿ ಆಮಂತ್ರಿಸಿದ್ದರು. ವೆಂಕಪ್ಪನವರು ಸಂಘದ ವಿದ್ಯಾಪ್ರಚಾರ ಕಾರ್ಯವನ್ನು ಮೆಚ್ಚಿ ಸಂಘದ ಕಾರ್ಯಕ್ಕಾಗಿ ೧೦೧ ರೂ. ಕಾಣಿಕೆ ಕೊಟ್ಟರು.

ಇಲಕಲ್ಲ ವರ್ತಕ ಸಂಘದವರು ಶ್ರೀ ರೇವಡಿ ವಕೀಲರ ಅಧ್ಯಕ್ಷತೆಯಲ್ಲಿ ಸಭೆ ಸೇರಿಸಿ ಮುಂಬೈ ಸರಕಾರದ ಪಾರ್ಲಮೆಂಟರಿ ಸೆಕ್ರೆಟರಿಗಳಾಗಿರುವ ಶ್ರೀ ಕಂಠಿಯವರಿಗೆ ಮಾನಪತ್ರವನ್ನು ಸಮರ್ಪಿಸಿದರು.

ನೇಕಾರರಿಗೆ ಈಗ ಸಿಕ್ಕುವ ನೂಲು ಕೇವಲ ೫ ದಿನ ಮಾತ್ರ ಸಾಲುವಷ್ಟಿದ್ದು ಉಳಿದ ದಿನಗಳಲ್ಲಿ ಅವರು ಕೆಲಸವಿಲ್ಲದೆ ಕೂಡ್ರಬೇಕಾಗುವದು. ಇದನ್ನರಿತು ಚರಖಾ ಸಂಘದವರು ಮಂದಾಲದಲ್ಲಿ ನೇಯಿಗೆಯ ಉಪ ಕೇಂದ್ರವೊಂದನ್ನು ಸ್ಥಾಪಿಸಿರುವರು. ನೇಕಾರರು ಇದರ ಲಾಭ ಪಡೆಯಬೇಕು.

### ಬಳ್ಳಾರಿ

ಬಳ್ಳಾರಿಯಲ್ಲಿ ಜಿಲ್ಹಾ ಕಲೆಕ್ಟರರಾದ ಕೆ ಎಸ್ ಅನಂತರಾಮನ್‌ರು ಹರಿಜನ ವಿದ್ಯಾರ್ಥಿ ನಿಲಯದ ವಿದ್ಯಾರ್ಥಿಗಳಿಗೆ ಕಂಬಳಿ, ಚಾಪೆ ಊಟದ ತಟ್ಟೆ ಥಾಲಿ ಮೊದಲಾದವುಗಳನ್ನು ಕೊಟ್ಟರು. ಹಿಂದುಗಳು ಪ್ರಾಯಶ್ಚಿತ್ತ ಬುದ್ಧಿಯಿಂದ ಹರಿಜನ ಸೇವೆ ಮಾಡಬೇಕೆಂದು ಅವರು ತಮ್ಮ ಭಾಷಣದಲ್ಲಿ ಹೇಳಿದರು.

ಹೂವಿನ ಹಡಗಲಿ ಪ್ರಾಥಮಿಕ ಶಾಲಾ ಮಂಡಳದವರಿಗೆ ಹೊಳಲುಗ್ರಾಮದ ಶ್ರೀಮಂತ ಬೆಳಗಾವಿ ಸಣ್ಣ ಚನ್ನಬಸವಪ್ಪನವರು ತಮ್ಮ ಅವಸಾನ ಕಾಲದಲ್ಲಿ ತಮ್ಮ ಸ್ಮಾರಕಕ್ಕಾಗಿ ಒಂದು ಕೋಣೆ ಕಟ್ಟಿಸಲು ೨೦೦೦ ರೂಪಾಯಿ ತಮ್ಮ ಮರಣಶಾಸನದಲ್ಲಿ ಬರೆದು ಕೊಟ್ಟಿದ್ದಾರೆ.

## ಮುಂಬಯಿ

ನವಂಬರ ೨ನೇ ವಾರಕ್ಕೆ ಪಂಡಿತ ಜವಾಹರಲಾಲರಿಗೆ ೫೮ ವರ್ಷಗಳು ತುಂಬುವದರಿಂದ ಅಖಿಲ ಭಾರತ ವಿದ್ಯಾರ್ಥಿ ಕಾಂಗ್ರೆಸ್ಸಿನವರು ಅವರ ವಿಷಯದಲ್ಲಿ ಗೌರವ ವ್ಯಕ್ತಮಾಡಲು ಅವರಿಗೆ ೫೮ ತೊಲಿ ಬಂಗಾರ ಗಟ್ಟಿಯನ್ನು ಅರ್ಪಿಸಲು ಯೋಚಿಸಿದ್ದಾರೆ. ಆ ಕಾಲಕ್ಕೆ ಹುತಾತ್ಮರ ಜೀವನ ಚರಿತ್ರೆ ಮೊದಲಾದ್ದನ್ನು ಪ್ರಸಿದ್ಧಿಸಲಿದ್ದಾರೆ.

೪೦ ರೂಪಾಯಿಗಳಿಗಿಂತ ಕಡಮೆ ಸಂಬಳ ಸಿಕ್ಕುವ ಪ್ರಾಥಮಿಕ ಶಿಕ್ಷಕರಿಗೆ ೫ ರೂಪಾಯಿ ಮತ್ತು ೪೦ ರೂಪಾಯಿಗಿಂತ ಹೆಚ್ಚು ಸಂಬಳ ಸಿಕ್ಕುವವರಿಗೆ ೧೦ ರೂಪಾಯಿ ತಾತ್ಪೂರ್ತಿಕ ಸಂಬಳ ಹೆಚ್ಚಿಸಿರುವರು. ಅಂಟ್ರೆಂಡ ಶಿಕ್ಷಕರಿಗೆ ೫ ವರ್ಷಗಳ ವರೆಗೆ ೨೫ ರೂ. ಮತ್ತು ಅನಂತರ ೨೬—೧—೩೦ ಈ ರೀತಿ ಮೊದಲು ಸಂಬಳ ಕೊಡುವದನ್ನು ಸಾರಲಾಗಿತ್ತು. ಅದರೀಗ ೨ ವರ್ಷಗಳ ಪ್ರೊಬೇಶನರಿ ನೋಕರಿ ನಂತರ ಕೂಡಲೆ ಅವರಿಗೆ ೨೬—೧—೩೦ ಸಂಬಳ ಸ್ಕೇಲ ಜಾರಿ ಮಾಡಲಾಗುವದು. ಅದೇ ರೀತಿ ೧೦ ವರ್ಷ ನೋಕರಿ ಆದ ಅಂಟ್ರೆಂಡ ಶಿಕ್ಷಕರಿಗೆ ಟ್ರೇಂಡ ಶಿಕ್ಷಕರ ಸ್ಕೇಲು ಸಿಕ್ಕುವದು.

ಮುಂಬಯಿ ಸರಕಾರದವರು ತಮ್ಮ ಕೆಳಗಿನ ದರ್ಜೆ ನೋಕರರಿಗೆ ಸಂಬಳ ಪ್ರಮಾಣ ಪುನರ್ವಿಮರ್ಶಿಸುವ ವರೆಗೆ ೧೯೪೬ ಅಗಷ್ಟ ೧ ರಿಂದ ೪೦ ರೂ. ಕೆಳಗಿನ ಸಂಬಳದವರಿಗೆ ತಿಂಗಳಿಗೆ ೫ ರೂ. ೪೦ ರಿಂದ ೨೫೦ ರೂ. ಸಂಬಳದವರಿಗೆ ೧೦ ರೂಪಾಯಿ ಪರಿಹಾರ ಮಂಜೂರ ಮಾಡಿರುವರು.

ಮುಂಬಯಿ ಪ್ರಾಂತದಲ್ಲಿಯ ಜೇಲು ಆಡಳಿತದಲ್ಲಿ ಸುಧಾರಣೆ ಮಾಡುವದಕ್ಕಾಗಿ ವಿಧಾಯಕ ಸೂಚನೆ ಸೂಚಿಸಲು ಶ್ರೀ ಮಂಗಳದಾಸ ಪಕ್ವಾಸಾ. ಎನ್. ವಿ. ಗಾಡಗೀಳ, ಬಿ. ಆರ್. ಘೋರ್ಪಡೆ, ಡಿ. ಪಿ. ಕರಮರಕರ, ಕುಮಾರಿ ಇಂದುಮತಿ ಶೇಠ ಮತ್ತು ಜೇಲುಗಳ ಮುಖ್ಯಾಧಿಕಾರಿಗಳ ಒಂದು ಸಮಿತಿಯನ್ನು ಸರಕಾರದವರು ನಿಯಮಿಸಿರುವರು. ಕೈದಿಗಳ ಮಾನಸಿಕ ಸುಧಾರಣೆ ಆಗುವಂತೆ ವಿಧಾಯಕ ಸೂಚನೆ ಮಾಡಲು ಸಮಿತಿಯವರಿಗೆ ಕೇಳಿಕೊಳ್ಳಲಾಗಿದೆ.

ಮುಂಬಯಿಯಲ್ಲಿ ಇನ್ನೂ ಗಲಭೆ ನಡೆದಿದ್ದು ವಿಶ್ವವಿದ್ಯಾಲಯದ ವೈದ್ಯಕೀಯ ಪರೀಕ್ಷೆಗಳನ್ನು ಮುಂದೆ ಹಾಕಿದ್ದಾರೆ.

ಹರಿಜನರ ಕೆಲವು ಸಾಮಾಜಿಕ ಅಪಾತ್ರತೆಗಳನ್ನು ದೂರ ಮಾಡುವ ಮಸೂದೆಯು ಈ ಸಲದ ಮುಂಬಯಿ ಸರಕಾರದ ಗ್ಯಾಜಿಟನಲ್ಲಿ ಪ್ರಸಿದ್ಧವಾಗಿದೆ. ಸಾರ್ವಜನಿಕ ರಸ್ತೆ, ಸಂಸ್ಥೆ, ವಾಹನ ಮೊದಲಾದವುಗಳ ಸಂಬಂಧದಲ್ಲಿ ಅವರಿಗೆ ಸೌಮ್ಯದ ಹಕ್ಕು ದಯಪಾಲಿಸಿದ್ದು ಅದಕ್ಕೆ ಅಡ್ಡಿ ಮಾಡಿದವರನ್ನು ದಂಡಿಸುವದೇ ಮಸೂದೆಯ ಉದ್ದೇಶವಿರುವದು. ಸದ್ಯದಲ್ಲಿ ಇದ್ದ ಈ ಅಪಾತ್ರತೆಯನ್ನು ಯಾರೂ ಮನ್ನಿಸತಕ್ಕದ್ದಲ್ಲೆಂದು ಸಾರಲಾಗಿದೆ.

## ಮದ್ರಾಸ

ಹಿಂದುಸ್ತಾನದಲ್ಲಿಯ ಪ್ರಾಂತಗಳನ್ನು ಭಾಷೆ ಹಾಗು ಸಂಸ್ಕೃತಿಯ ತಳಹದಿಯ ಮೇಲೆ ಪುನರ್ಘಟಿಸಬೇಕೆಂದು ಪ್ರಾಂತಗಳ ನೈಸರ್ಗಿಕ ಗಡಿಗಳನ್ನು ಹಾಗು ಸಂಬಂಧಿಸಿದ ವಿಷಯಗಳನ್ನು ನಿರ್ಣಯಿಸಲು ಒಂದು ಮಂಡಳ ನಿಯಮಿಸಬೇಕೆಂದು ಬೇಡಿಕೊಳ್ಳುವ ನಿರ್ಣಯ ಗುಂಟೂರದಲ್ಲಿ ಕೂಡಿದ ಭಾಷಾನುಗುಣ ಗುಂಪಿನ ಪರಿಷತ್ತಿನಲ್ಲಿ ಸ್ವೀಕೃತವಾಯಿತು. ಕನ್ನಡನಾಡು ತಮಿಳನಾಡು ಹಾಗು ಹೈದರಾಬಾದ ಸಂಸ್ಥಾನಗಳಿಂದ ಜನರು ಕೂಡಿದ್ದರು.

ಶ್ಯಾಮರೋನಿಯಾ ಎಂಬ ಬ್ರಿಟಿಶ ಹಡಗದಿಂದ ಸಿಂಗಾಪುರದಿಂದ ಮದ್ರಾಸಕ್ಕೆ ಹೊರಟ ಪ್ರಯಾಣಿಕರನ್ನು ಕೆಟ್ಟ ರೀತಿಯಿಂದ ನಡೆಸಿಕೊಳ್ಳಲಾಯಿತೆಂಬ ದೂರು ಬಂದದ್ದರಿಂದ ಹಿಂದುಸ್ತಾನ ಸರಕಾರದವರು ಆ ಬಗ್ಗೆ ವಿಚಾರಣೆ ನಡೆಸಿದ್ದಾರೆ.

೧೯೪೨ರಲ್ಲಿ ಹಾಕಲಾದ ಸಾಮುದಾಯಿಕ ದಂಡವನ್ನು ತಿರುಗಿಕೊಡಲು ಮದ್ರಾಸ ಸರಕಾರ ಅಜ್ಞೆ ಹೊರಡಿಸಬಹುದೆಂದು ತಿಳಿಯುತ್ತದೆ.

# ಹಿಂದುಸ್ತಾನ

## ಮಧ್ಯಪ್ರಾಂತ

ಸರಕಾರಕ್ಕೆ ಒಂದು ಲಕ್ಷ ರೂಪಾಯಿ ಮೋಸ ಮಾಡಿದ ಅಪಾದನೆಯಿಂದ ೬ ಜನರನ್ನು ಬಂಧಿಸಲಾಗಿದೆ. ಕಲಕತ್ತೆಯ ಓರ್ವ ಲಕ್ಷಾಧೀಶ ಉದ್ದಿಮೆದಾರನು ಹಾಗು ಹಿಂದೀ ಸಂಗ್ರಹ ಖಾತೆಯ ಇನಸ್ಪೆಕ್ಟರರು ಸೆರೆಹಿಡಿಯಲ್ಪಟ್ಟರುವರು. ಹೆಚ್ಚು ರೊಕ್ಕ ಪಡೆದು ಕೀಳ ತರಗತಿಯ ಸಾಮಾನುಗಳಿಂದಡೇರೆಗಳನ್ನು ಸಿದ್ಧಪಡಿಸಿದರೆಂದು ಇವರ ಮೇಲೆ ಆರೋಪ.

ಘಟನಾ ಸಮಿತಿಯಲ್ಲಿ ಮಂಡಿಸಬೇಕಾದ ಹರಿಜನರ ಬೇಡಿಕೆಗಳನ್ನು ವಿಚಾರಿಸುವ ಕುರಿತು ಎಲ್ಲ ಪ್ರಾಂತಗಳ ಶಾಸನ ಸಭೆಗಳ ಹರಿಜನ ಸದಸ್ಯರ ಸಭೆಯನ್ನು ಘಟನಾ ಸಮಿತಿ ಸೇರುವ ಪೂರ್ವದಲ್ಲಿಯೆ ನಾಗಪುರದಲ್ಲಿ ಕರೆಯಬೇಕೆಂದು ನಾಗಪುರದ ಹರಿಜನ ಕಾರ್ಯಕರ್ತರು ನಿರ್ಧರಿಸಿದ್ದಾರೆ.

ಮಧ್ಯಪ್ರಾಂತ ಶಾಸನ ಸಭೆಯ ಮುಂದೆ ಸತ್ಯಾಗ್ರಹ ಹೂಡಿದ್ದಕ್ಕಾಗಿ ೧೮ ನೇ ತಾರೀಕು ದಲಿತವರ್ಗ ಮಹಾಮಂಡಳದ ೨೬೬ ಜನ ಬಂಧಿಸಲ್ಪಟ್ಟು ಸಭೆ ಮುಂದರಿದ ಮೇಲೆ ಎಲ್ಲರೂ ಬಿಡಲ್ಪಟ್ಟರು. ಅಂದಿನ ಸತ್ಯಾಗ್ರಹಿಗಳಲ್ಲಿ ೧೮ ಸ್ತ್ರೀಯರು ೧೨ ಹುಡುಗರು ಇದ್ದರು.

ನಾಗಪುರದಲ್ಲಿ ೧೬ ನೇ ತಾರೀಕು ೪೦೨ ಜನ ದಲಿತ ವರ್ಗದವರು ಶಾಸನ ಸಭೆಯೆದುರಿಗೆ ಸತ್ಯಾಗ್ರಹ ಮಾಡಿದರು. ಅವರೆಲ್ಲರನ್ನೂ ಸೆರೆಹಿಡಿದು ಸಾಯಂಕಾಲ ಬಿಡುಗಡೆ ಮಾಡಿದರು.

ನಾಗಪುರ ವಿಶ್ವವಿದ್ಯಾಲಯದವರು ಮಹಾತ್ಮಾ ಗಾಂಧಿಯವರಿಗೆ ಡಾಕ್ಟರ ಅಫ್ ಲೆಟರ್ಸ ಎಂಬ ಗೌರವ ಪ್ರಶಸ್ತಿಯನ್ನು ಕೊಡಬೇಕೆಂದು ನಿರ್ಧರಿಸಿದ್ದಾರೆ.

## ಸಿಂಧ

ಸಿಂಧ ಸಾಸನ ಸಭೆ ವಿಸರ್ಜನ ಹೊಂದಿದ್ದರೂ ಸಿಂಧದಿಂದ ಘಟನಾ ಸಮಿತಿಗೆ ಆರಿಸಿ ಹೋದ ನಾಲ್ವರು ಸದಸ್ಯರ ಸದಸ್ಯತ್ವವೇನು ರದ್ದಾಗುವದಿಲ್ಲೆಂದೂ ಬ್ರಿಟಿಶ ಮಂತ್ರಿತ್ರಯರ ಪ್ರಕಟನೆಯಲ್ಲಿಯ ಕಲಮು ಊರ್ಜಿತದಲ್ಲಿರುವ ವರೆಗೆ ಅವರೇ ಸದಸ್ಯರಾಗಿ ಉಳಿಯುವರೆಂದು ಸಿಂಧ ಸರಕಾರದ ಕಾಯದೆ ಸಲಹೆಗಾರರು ಸಾರಿದರು.

ಸಿಂಧ ಶಾಸನ ಸಭೆಯ ವಿರೋಧಿ ಪಕ್ಷದ ಧುರೀಣರಾಗಿದ್ದ ಸಯ್ಯದರವರು ಗವರ್ನರರ ಆಮಂತ್ರಣದ ಮೇರೆಗೆ ೧೩ನೇ ತಾರೀಖು ಗವರ್ನರರನ್ನು ಕಂಡರು. ಇದೀಗ ಅವರು ಕಾಂಗ್ರೆಸ ಮುಖಂಡರೊಡನೆ ಮಾತುಕತೆಯಾಡಲು ದಿಲ್ಲಿಗೆ ಹೋಗಿರುವರು.

---

ಸಾಮ್ರಾಜ್ಯವಾದದ ಸಂಪೂರ್ಣ ಉಚ್ಚಾಟನೆಯಾಗದೆ ಸ್ವರಾಜ್ಯ ಸಿಕ್ಕುವುದಿಲ್ಲ. ಬ್ರಿಟಿಶ ಸೈನಿಕರು ನಮ್ಮ ದೇಶವನ್ನಷ್ಟೇ ಅಲ್ಲ ನಮ್ಮ ಸಮುದ್ರವನ್ನೂ ಬಿಟ್ಟುಕೊಡಬೇಕು ಎಂದು ಮದ್ರಾಸದ ಮಲೆಯಾಳಿ ನಾಗರಿಕರು ಏರ್ಪಡಿಸಿದ ಸ್ವಾಗತ ಸಭೆಯಲ್ಲಿ ಶ್ರೀ ಕೃಷ್ಣ ಮೆನನ್‌ರು ಹೇಳಿದರು. ಕೋಚೀನದಲ್ಲಿ ಸ್ಥಾಪಿಸಲ್ಪಟ್ಟ ಪ್ರಜಾಮಂತ್ರಿ ಮಂಡಳದ ಬಗ್ಗೆ ಅವರು ಆನಂದ ವ್ಯಕ್ತಮಾಡಿದರು.

ಸೌಥ ಇಂಡಿಯನ್ ರೇಲ್ವೆ ಕೆಲಸಗಾರರು ಸಪ್ಟಂಬರ ೨೪ ನೇ ತಾರೀಕಿನ ಮಧ್ಯರಾತ್ರಿಯೊಳಗಾಗಿ ಕೆಲಸಕ್ಕೆ ಮರಳಿ ಬರದಿದ್ದರೆ ತಮ್ಮ ನೋಕರಿಯನ್ನು ಕಳೆದುಕೊಂಡಂತಾಗುವದು ಎಂದು ಜನರಲ್ ಮ್ಯಾನೇಜರರು ಸಾರುತ್ತಾರೆ. ಪ್ರತಿಯೊಬ್ಬ ಕೆಲಸಗಾರನಿಗೆ ಎಚ್ಚರಿಕೆಯೆಂದು ಈ ಪ್ರಕಟನೆಯನ್ನು ಹೊರಡಿಸಲಾಗಿದೆ.

ಭೋಜನಾಲಯ, ಚಹಾದಂಗಡಿ ಮತ್ತು ಫಲಾಹಾರದ ಅಂಗಡಿಗಳಲ್ಲಿ ಅಸ್ಪೃಶ್ಯತೆಯನ್ನು ಮನ್ನಿಸುವದು ಮತ್ತು ಪ್ರವೇಶಕ್ಕೆ ನಿರ್ಬಂಧಗೊಳಿಸುವದು ಅಪರಾಧವೆಂದು ಸಾರುವ ಮಸೂದೆಯೊಂದನ್ನು ಮದ್ರಾಸ ಸರಕಾರದವರು ಬೇಗನೆ ಮಾಡಲಿರುವರು.

## ಹೊಸದಿಲ್ಲಿ

ಕಬ್ಬಿಣ, ಉಕ್ಕು, ಮಶಿನ್ ಸ್ಕ್ರೂ, ವಾಯರ ರೋಲ ವಾಯರ ನೇಲ್ಸ ಬೋಲ್ಟ ಡಿಜಲ್ ಎಂಜಿನ್ ಮೋಟಾರು ಜನರೇಟರ ಮ್ಯಾಮಟ ಕಪ್ಲ್ಯಾಂಟ್ಸ ಡಾಂಬರಿನಿಂದ ಸಿದ್ಧ ಮಾಡಿದ ಬಣ್ಣ ಚೀನಾವು ಮೋಟರ ಸ್ಪಿರಿಟ ಚಿಮಣಿಎಣ್ಣೆ ಬೇರೆ ಬೇರೆ ತರದ ಯಂತ್ರ ಹಡಗ ಉಗಿಹಡಗ ಲಾಂಚ ನಾವೆ ವಜ್ರ ಮೊದಲಾದ ೧೦೦ ಕ್ಕಿಂತ ಹೆಚ್ಚು ವಸ್ತುಗಳನ್ನು ಹಿಂದುಸ್ತಾನ ಸರಕಾರದವರು ನಿಯಂತ್ರಣ ನಿರ್ಬಂಧಗಳಿಂದ ಮುಕ್ತಮಾಡಿರುವರು.

ಮೊದಲನೆ ಹಿಂದೀ ರಾಷ್ಟ್ರೀಯ ಸೇನೆಯ ಸಂಸ್ಥಾಪಕರಾದ ಸರದಾರ ಮೋಹನಸಿಂಗರು ಕಾಂಗ್ರೆಸ್ ಸೋಶಾಲಿಸ್ಟ ಪಕ್ಷದಲ್ಲಿ ಸೇರಿದ ಸುದ್ದಿ ಸುಳ್ಳಿರುವದೆಂದು ಅವರು ಸಾರಿದ್ದಾರೆ.

ಕೇಂದ್ರ ಶಾಸನಸಭೆಯ ಶರದೃತು ಅಧಿವೇಶನ ಹೊಸದಿಲ್ಲಿಯಲ್ಲಿ ೨೮ ಅಕ್ಟೋಬರಕ್ಕೆ ಪ್ರಾರಂಭವಾಗಿ ಸದ್ಯದ ಏರ್ಪಾಡಿನಂತೆ ನವಂಬರ೧೬ರವರೆಗೆ ನಡೆಯುವದು. ಸರಕಾರೇತರ ಮಸೂದೆಗಳಿಗೆ ನವಂಬರ ೭ ಹಾಗು ೧೫ ಮತ್ತು ಗೊತ್ತುವಳಿಗಳಿಗಾಗಿ ನವಂಬರ ೮ ಹಾಗು ೧೬ ಈ ೪ ದಿನ ಗೊತ್ತುಪಡಿಸಿದ್ದಾರೆ.

ಘಟನಾ ಸಮಿತಿಯು ಡಿಸೆಂಬರ ೯ಕ್ಕೆ ಪ್ರಾರಂಭವಾಗುವದೆಂದು ಹಿಂದುಸ್ತಾನ ಸರಕಾರವವರು ಪ್ರಕಟನೆ ಹೊರಡಿಸಿದ್ದಾರೆ.

## ಸಂಯುಕ್ತಪ್ರಾಂತ

ಅಖಿಲ ಭಾರತ ಕಾಂಗ್ರೆಸ ಕ್ರಾಂತಿಕಾರಕ ಸಂಘವೆಂಬ ಹೊಸ ಪಕ್ಷವೊಂದು ದಿಲ್ಲಿಯಲ್ಲಿ ಸಪ್ಟೆಂಬರ ೨೨ ಕ್ಕೆ ಕೂಡುವ ಮಹಾಧಿವೇಶನದಲ್ಲಿ ಸ್ಥಾಪಿತವಾಗುವದೆಂದು ಶಿವನಲಾಲ ಸೆಕ್ಸೆನಾ ಇವರು ಸಾರುತ್ತಾರೆ. ಮಾನವನು ಮಾನವರನ್ನು ಸುಲಿಯದೆ ಇರುವಂಥ ಹೊಸ ಸಮಾಜ ರಚನೆಗಾಗಿ ಮತ್ತು ಪ್ರತಿಯೊಬ್ಬರ ಸಾಂಸ್ಕೃತಿಕ, ನೈತಿಕ, ಮಾನಸಿಕ ಮತ್ತು ಶಾರೀರಿಕ ಸೌಕರ್ಯವನ್ನೊದವಿಸಿಕೊಡುವದು ಇದರ ಉದ್ದೇಶ.

ಪೋಲೀಸರು ಕಾನಪುರ ಜಿಲ್ಹಾ ಕಮ್ಯುನಿಸ್ಟ ಪಕ್ಷದ ಕಚೇರಿಯನ್ನು ಮುತ್ತಿ ಸುಮಾರು ೬ ಜನರನ್ನು ಸೆರೆ ಹಿಡಿದರು. ನಗರದಲ್ಲಿ ಒಟ್ಟಾರೆ ೧೬ ಜನರನ್ನು ಸೆರೆ ಹಿಡಿಯಲಾಗಿದೆ. ತಮ್ಮ ಬೇಡಿಕೆಗಳನ್ನು ಪೂರಯಿಸುವ ವರೆಗೆ ಮತ್ತು ಬಂಧಿತ ಮುಖಂಡರನ್ನೆಲ್ಲ ಬಿಡುವವರೆಗೆ ಸಂಪು ಹೂಡಬೇಕೆಂದು ಮಜದೂರ ಸಭಾ ಧುರೀಣರು ಸಾರ್ವಜನಿಕ ಸಭೆಯಲ್ಲಿ ಒತ್ತಿ ಹೇಳಿದರು.

## ಬಂಗಾಲ

೨೦೦ಸಶಸ್ತ್ರ ಜನರು ಅಸಾಮ ಬಂಗಾಲ ರೇಲ್ವೆ ಮಾರ್ಗದಲ್ಲಿ ಸಪ್ಟಂಬರ ೧೧ನೇ ರಾತ್ರಿ ಬೇಗಂಸರಾಯಿ ರೇಲ್ವೆ ಸ್ಟೇಶನ್ನಿನ ಕೈಗಂಬದ ಹತ್ತರ ಮಾಲಿನ ಉಗಿಬಂಡಿಯನ್ನು ನಿಲ್ಲಿಸಿ ಅಕ್ಕಿಚೀಲಗಳನ್ನೂ ಎಣ್ಣೆಯ ಡಬ್ಬಿಗಳನ್ನೂ ಲೂಟಮಾಡಿಕೊಂಡು ಹೋಗಿರುವರು ಪೋಲೀಸರು ಅಲ್ಲಿಗೆ ಹೋಗಿ ಒಬ್ಬನನ್ನು ಬಂಧಿಸಿರುವರು.

ಒತ್ತಾಯದ ಪುಕ್ಕಟೆ ಪ್ರಾಥಮಿಕ ಶಿಕ್ಷಣವನ್ನು ಬಂಗಾಲದಲ್ಲಿ ಪ್ರಾರಂಭಿಸುವದೇ ತಮ್ಮ ಶಿಕ್ಷಣ ಕ್ಷೇತ್ರದಲ್ಲಿಯ ಆದ್ಯ ಸಮಸ್ಯೆಯಾಗಿದೆ. ದೆಂದು ಬಂಗಾಲದ ಶಿಕ್ಷಣ ಮಂತ್ರಿ ಸಯ್ಯದ ಮುಜುಮುದ್ದೀನರು ಶಾಸನ ಸಭೆಯಲ್ಲಿ ಹೇಳಿದರು.

೬ನೇ ತಾರೀಖು ಕಲ್ಕತ್ತೆಯಲ್ಲಿ ವಿಪರೀತ ಮಳೆ ಬಿದ್ದು ಕೆರೆಗಳೆಲ್ಲ ಒಡೆದು ನೀರು ರಸ್ತೆತುಂಬಿಬಂದದ್ದರಿಂದ ಅದರ ಸಂಗಡ ಮೀನಗಳೂ ಬಳೆದು ಬಂದವು ಅನೇಕರು ಬೀದಿಗಳಲ್ಲಿಯೆ ಮೀನ ಹಿಡಿಯುತ್ತಿದ್ದರು. ಈ ಮಳೆನೀರಿನಿಂದ ಪಾರ್ಕಸರ್ಕಸ್ಸಿನಲ್ಲಿ ಅನೇಕ ಗುಡಿಸಲುಗಳು ಬಳೆದು ಹೋದುವು. ಮುಸ್ಲಿಂ ಪರಿಹಾರ ಸಮಿತಿಯವರು ಸುಮಾರು ೧೦೦೦ ಜನರನ್ನು ಉಳಿಸಿದರು.

## ಬಿಹಾರ

ಗಂಡಕಿ ಮತ್ತು ವಾಘಮತಿ ನದಿಗಳಿಗೆ ನೆರೆ ಬಂದಿದ್ದರಿಂದ ಸುಮಾರು ಸಾವಿರ ಗುಡಿಸಲುಗಳು ಬಳೆದು ಹೋದವು. ಇದರಿಂದ ೫೦೦ ಜನ ನಿರಾಶ್ರಿತರಾಗಿರುವರು. ಇನ್ನೂ ಹಲವು ಹಾಣೆಗಳೂ ನೆರೆಯ ಬಾಧೆಗೆ ತುತ್ತಾಗಿರುವವು. ಪರಿಹಾರ ಕಾರ್ಯ ಪ್ರಾರಂಭವಾಗಿದೆ.

ಪಾಟಣಾ ಗಯಾ ಮತ್ತು ಮೋಸಲಾಯಿನಲ್ಲಿ ಟಿಕೀಟಿಲ್ಲದೆ ಪ್ರವಾಸ ಮಾಡಿದ್ದಕ್ಕಾಗಿ ಮತ್ತು ಗಾಡಿಗಳ ಹೊರಗಿನ ಹಲಿಗೆಗಳ ಮೇಲೆ ಪ್ರವಾಸ ಮಾಡಿದ್ದಕ್ಕಾಗಿ ಸುಮಾರು ೨೦೦ಜನರು ೧... ಈ ಎರಡು ದಿನಗಳಲ್ಲಿ ಸೆರಹಿಡಿಯಲ್ಪಟ್ಟರು.

## ಸಂಸ್ಥಾನಗಳು

ಕೊಲ್ಹಾಪುರ ಸಂಸ್ಥಾನ ಸರಕಾರದವರು ತಮ್ಮ ನವಕರರ ಸಂಬಳ ಪ್ರಮಾಣವನ್ನು ಪರಿಶೀಲಿಸಲು ವಿ. ವಿ. ಚವ್ಹಾಣ ಡಿ. ಜಜ್ಜ, ಎ. ಸುಬ್ರಹ್ಮಣ್ಯನ್, ವಿ. ಕೆ. ಬಾಗಲ್ ಇವರ ಸಮಿತಿಯನ್ನು ನೇಮಿಸಿದ್ದಾರೆ. ಎಚ್. ಎನ್. ಕಾಮತರು ಕಾರ್ಯದರ್ಶಿಗಳು. ಸರಕಾರೇತರರ ಬಹುಮತವಿಲ್ಲೆಂದು ಕಾರಕೂನ ಹಾಗು ಕೆಳಗಿನ ದರ್ಜೆಯ ನೋಕರ ಸಂಘದವರು ಇದಕ್ಕೆ ತಮ್ಮ ಅಸಮ್ಮತಿ ವ್ಯಕ್ತಪಡಿಸಿದ್ದಾರೆ.

ಮಾಚಿರೆಡ್ಡಿಪಲ್ಲಿ ಹಾಗು ಅಂಕನೂರಗಳಲ್ಲಿ ಪೋಲೀಸರು ಅತ್ಯಾಚಾರಮಾಡಿದರೆಂದು ... ಲಾಗುತಿರುವ ಸಂಬಂಧದಲ್ಲಿ ವಿಚಾರ ಮಾಡಲು ನಿಯಮಿಸಲ್ಪಟ್ಟ ವಿಚಾರಣಾಮಂಡಳದವರು ವಿಚಾರಣೆ ನಡೆಸಿರುವರು. ಲೆವಿ ಕಾಳಿನ ವಸೂಲಿಯೆ ಗೊಂದಲಕ್ಕೆ ಕಾರಣವಾಯಿತೆಂದೂ ಪೋಲೀಸರು ಹಾಗು ರೆವಿನ್ಯೂ ಅಧಿಕಾರಿಗಳು ಕೆಲವು ಹಳ್ಳಿಗ ರನ್ನು ಥಳಿಸಿದರೆಂದೂ ಸಾಕ್ಷಿದಾರರು ಹೇಳಿದರು.

ಸಂಸ್ಥಾನಿಕರು ಹೊಣೆಗಾರ ರಾಜ್ಯಪದ್ಧತಿಯನ್ನು ಸ್ಥಾಪಿಸಿದರೆ ಅವರ ಒಕ್ಕೂಟದಿಂದ ಪ್ರಜೆಗಳ ಹಿತವಾಗುವದೆಂದು ಶ್ರೀ ದೇಶಪಾಂಡೆ ಗಂಗಾಧರರಾಯರು ಅಭಿಪ್ರಾಯಪಟ್ಟರು. ಅವರು ಬುಧಗಾಂವ, ಸಾಂಗಲಿ, ರಾಮದುರ್ಗ ಸಂಸ್ಥಾನೀಶರನ್ನು ಕಂಡು ಮಾತುಕತೆಯಾಡಿದರು. ಶ್ರೀ ರಂಗರಾವ ದಿವಾಕರರು ಸಾಂಗಲಿ, ಬುಧಗಾಂವ ರಾಮದುರ್ಗ ಸಂಸ್ಥಾನಿಕರನ್ನು ಭೆಟಿಯಾಗಿ ಸಂಸ್ಥಾನ ಪರಿಸ್ಥಿತಿ ಸಂಬಂಧದಲ್ಲಿ ವಿಚಾರ ವಿನಿಮಯ ಮಾಡಿದರು.

ಮಿರಜಿ ಸಂಸ್ಥಾನದಲ್ಲಿಯ ಎಲ್ಲ ತಾಲೂಕಗಳ ಕೆಲಸಗಾರರ ಸಭೆ ಸೇರಿ ಸಂಸ್ಥಾನಿಕರು ಬೇಗನೆ ಹೊಣೆಗಾರ ರಾಜ್ಯ ಪದ್ಧತಿಯನ್ನು ಪ್ರಾರಂಭಿಸಬೇಕೆಂದು ಕೇಳಿಕೊಳ್ಳುವ ಗೊತ್ತುವಳಿ ಸ್ವೀಕೃತವಾಯಿತು. ಅಲ್ಲಿಯವರೆಗೆ ನಡುಗಾಲ ಸರಕಾರ ರಚಿಸಬೇಕೆಂದು ಬಿನ್ನವಿಸಿಕೊಳ್ಳಲಾಯಿತು.

ಘಟನಾ ಸಮಿತಿಯ ಸದಸ್ಯರಾದ ಶ್ರೀ ರಂಗನಾಥ ದಿವಾಕರರು ಸಾಂಗಲಿ, ರಾಮದುರ್ಗ, ಬುಧಗಾವ ಮೊದಲಾದ ಸಂಸ್ಥಾನಿಕರೊಡನೆ ಭಾಷಾವಾರ ಪ್ರಾಂತರಚನೆಯ ಮತ್ತು ಭಾವೀ ಭಾರತದ ಘಟನೆಯ ಬಗ್ಗೆ ಚರ್ಚೆ ಮಾಡಿದರು. ದಾವಣಗೆರೆಯಲ್ಲಿ ಸೇರಿದ್ದ ಕರ್ನಾಟಕ ಮಹಾಧಿವೇಶನದ ಗೊತ್ತುವಳಿಯ ಸ್ಪಷ್ಟೀಕರಣಮಾಡಿ ಪ್ರಾಂತೀಕರಣದ ಅವಶ್ಯಕತೆಯನ್ನು ಒತ್ತಿ ಹೇಳಿದರು.

ಮುಧೋಳ ಸಂಸ್ಥಾನದ ರಾಜ್ಯಘಟನೆಯನ್ನು ಸಿದ್ಧಪಡಿಸಲು ಶ್ರೀ ರಂಗನಾಥ ದಿವಾಕರ ಇವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದು ನೇಮಿಸಲ್ಪಟ್ಟಿದೆ. ಸಂಪೂರ್ಣ ಹೊಣೆಗಾರ ರಾಜ್ಯಪದ್ಧತಿಯುಳ್ಳ ಘಟನೆಯನ್ನೇ ಸಿದ್ಧಪಡಿಸಬೇಕೆಂದು ಪ್ರಜಾಸಂಘದವರು ಆಸಮಿತಿಯನ್ನು ಬಿನ್ನವಿಸಿಕೊಂಡಿದ್ದಾರೆಂದು ತಿಳಿಯುತ್ತದೆ.

---

ಮುಂಬಯಿ ಸರಕಾರದವರು ಧಾರವಾಡ ಮತ್ತು ಉತ್ತರ ಕನ್ನಡ ಜಿಲ್ಹೆಗಳಲ್ಲಿ ಮಲೇರಿಯದ ವಿರುದ್ಧ ಉಪಾಯಗಳನ್ನು ಪ್ರಾರಂಭಿಸಲಿರುವರು. ಪ್ರತಿಯೊಂದು ಮನೆಯಲ್ಲ ಕ್ರಿಮಿನಾಶಕ ನೀರು ಸಿಂಪಡಿಸುವರು. ಈ ಯೋಜನೆಯಿಂದ ಸರಕಾರಕ್ಕೆ ಸುಮಾರು ೩॥ಲಕ್ಷ ರೂಪಾಯಿ ವೆಚ್ಚ ಬರುವದು. ಇದೇ ೨೮ ನೇ ತಾರೀಖಿಗೆ ಮುಖ್ಯ ಮಂತ್ರಿ ಖೇರರಿಂದ ಇದರ ಉದ್ಘಾಟನೆಯಾಗುವದು

# ವಾಯಿಸರಾಯ—ಜಿನ್ನಾ ಭೆಟ್ಟಿ

## ವಾಯಿಸರಾಯರಿಂದ ಸ್ಪಷ್ಟೀಕರಣ ಮತ್ತು ಆಶ್ವಾಸನ ಕೇಳುವರು

## ಸುಭಾಸರು ಅಕ್ಟೋಬರ ಕೊನೆಗೆ ಪ್ರಕಟವಾಗುವರು

### ವೇವೆಲ್--ಜಿನ್ನಾ ಭೆಟ್ಟಿ

ಮುಸ್ಲಿಂ ಲೀಗ ಅಧ್ಯಕ್ಷರಾದ ಬ್ಯಾ. ಜಿನ್ನಾರವರ ಅಪೇಕ್ಷೆಯ ಮೇರೆಗೆ ವಾಯಿಸರಾಯ ಲಾರ್ಡ ವೇವೆಲ್ಲರು ಸೋಮವಾರ ಸಾಯಂಕಾಲ ಅವರ ಭೆಟ್ಟಿಯನ್ನು ತೆಗೆದುಕೊಂಡರು. ೭೫ ನಿಮಿಷಗಳ ವರೆಗೆ ಪರಸ್ಪರರಲ್ಲಿ ವಿಚಾರವಿನಿಮಯ ನಡೆಯಿತು. ಈ ಭೆಟ್ಟಿಯಲ್ಲಿ ಏನು ನಡೆಯಿತೆಂಬುದು ನಿಶ್ಚಿತವಾಗಿ ತಿಳಿದಿಲ್ಲ. ಈ ಭೆಟ್ಟಿಯಲ್ಲಿ ಅವರು ಮುಸ್ಲಿಂ ಲೀಗಿನ ಧೋರಣವನ್ನು ವಾಯಿಸರಾಯರಿಗೆ ತಿಳಿಸಿದರೆಂದು ಊಹಿಸಲಾಗುತ್ತದೆ. ವಾಯಿಸರಾಯರು ಮತ್ತು ನಡುಗಾಲ ಸರಕಾರದ ಉಪಾಧ್ಯಕ್ಷರಾದ ಪಂಡಿತ ನೆಹರುರವರು ಆಕಾಶವಾಣಿ ಭಾಷಣಗಳಲ್ಲಿ ವ್ಯಕ್ತಪಡಿಸಿದ ಧೋರಣಕ್ಕಿಂತ ಮುಂದೆ ಸರಕಾರ ಹೋಗಲಾರದೆಂಬುದಾಗಿ ವಾಯಿಸರಾಯರು ಜಿನ್ನಾರಿಗೆ ತಿಳಿಸಿರುವರಂತೆ. ಜಿನ್ನಾರವರ ಪ್ರತಿಕ್ರಿಯೆ ಇನ್ನೂ ಸ್ಪಷ್ಟವಾಗಿ ಗೊತ್ತಾಗಿಲ್ಲ. ಅವರು ನಡುಗಾಲ ಸರಕಾರದಲ್ಲಿ ಸೇರುವರೆಂದು ಕೆಲವರು ಊಹಿಸಿದರೆ ಇನ್ನೂ ಹಲವರು ತದ್ವಿರುದ್ಧ ಅಭಿಪ್ರಾಯಪಡುತ್ತಿರುವರು.

### ಜಿನ್ನಾರ ಧೋರಣೆಯೇನು?

ಸದ್ಯದ ಪರಿಸ್ಥಿತಿಯನ್ನು ನೋಡಿದರೆ ಜಿನ್ನಾರವರು ಮಂತ್ರಿತ್ರಯರ ದೀರ್ಘಾವಧಿ ಯೋಜನೆಗೆ ಒಪ್ಪಿ ಘಟನಾ ಸಮಿತಿಯಲ್ಲಿ ಸೇರಿ ತಮ್ಮ ಪಾಕಿಸ್ತಾನ ಯೋಜನೆಯನ್ನು ಕಾರ್ಯಕಾರಿ ಮಾಡುವ ಧೋರಣ ಸ್ವೀಕರಿಸುವ ಸಂಭವವಿಲ್ಲ; ಅದೇ ರೀತಿ ಸದ್ಯದ ನಡುಗಾಲ ಸರಕಾರದಲ್ಲಿಯೂ ಅವರು ಸೇರುವ ಸಂಭವವಿಲ್ಲೆಂದು ತೋರುತ್ತದೆ. ಅವರು ಸರಕಾರದ ಘಟನಾ ಸಲಹೆಗಾರರಾದ ಸರ್ ಬಿ. ಎನ್. ರಾವ ಇವರನ್ನು ಬುಧವಾರ ದಿನ ಭೆಟ್ಟಿಯಾಗಿ ೯೦ ನಿಮಿಷಗಳ ವರೆಗೆ ಅವರೊಡನೆ ಚರ್ಚೆ ನಡೆಸಿದರೆಂದು ತಿಳಿಯುತ್ತದೆ. ಭಾವೀ ಘಟನೆಯನ್ನೆಂತು ಸಿದ್ಧಪಡಿಸಲಾಗುವದು, ಅದರ ನಿಯಮ ನಿಬಂಧನೆಗಳೇನು ಮುಂತಾದ್ದನ್ನೆಲ್ಲ ಅವರು ರಾವ ಇವರೊಡನೆ ಚರ್ಚಿಸಿದರೆಂದು ತಿಳಿಯುತ್ತದೆ. ಈ ಚರ್ಚೆಯ ಫಲಿತಾಂಶವನ್ನನುಲಕ್ಷಿಸಿ ಅವರು ತಮ್ಮ ಪಾಕಿಸ್ತಾನದ ಸ್ಥಾನಮಾನಗಳನ್ನು ಕಲ್ಪಿಸಿಕೊಳ್ಳುವರೆಂದು ತಿಳಿಯುತ್ತದೆ. ಜಿನ್ನಾರವರು ವಾಯಿಸರ್ರಾಯರ ಎರಡನೆಯ ಭೆಟ್ಟಿಯಲ್ಲಿ (ಗುರುವಾರ) ಈ ವಿಷಯಗಳ ಬಗ್ಗೆ ಸ್ಪಷ್ಟೀಕರಣ ತಿಳಕೊಂಡ ಬಳಿಕ ಏನೆಂಬುದನ್ನು ನಿರ್ಧರಿಸುವರಂತೆ. ವಾಯಿಸರಾಯರಿಂದ ಸಮಾಧಾನಕರ ಆಶ್ವಾಸನ ದೊರೆತದ್ದಾದರೆ ಜಿನ್ನಾರು ಘಟನಾ ಸಮಿತಿಯನ್ನು ಸೇರಬಹುದೆಂದು ತಿಳಿಯುತ್ತದೆ. ಜಿನ್ನಾರವರ ಉತ್ತರದ ಬಗ್ಗೆ ವಿಚಾರ ಮಾಡುವದಕ್ಕಾಗಿ ವಾಯಿಸರಾಯರ ಮಂತ್ರಿಮಂಡಳದ ಸಭೆ ಸೇರುವದು. ಈ ರೀತಿ ಜಿನ್ನಾರವರು ಇನ್ನೂ ತಮ್ಮ ಧೋರಣವನ್ನು ಸ್ಪಷ್ಟಪಡಿಸಿರದಿದ್ದರೂ ಪ್ರತ್ಯಕ್ಷ ಹೋರಾಟದ ಸಿದ್ಧತೆಯಲ್ಲಿ ತೊಡಗಿರುವರೆಂದು ಹೇಳಲಾಗುತ್ತದೆ. ಅದರೂ ಜಿನ್ನಾರವರು ಹೀಗೆಯೆ ನಿರ್ಧರಿಸುವರೆಂದು ಈಗಲೆ ನಿಶ್ಚಿತವಾಗಿ ಹೇಳಲಿಕ್ಕೆ ಬರುವದಿಲ್ಲ-

### ಶೀಖರ ಅನುಕರಣೀಯ ಧೋರಣ

ಹಿಂದುಸ್ತಾನವನ್ನು ಜಾತೀಯ ತತ್ವದ ಮೇಲೆ ಒಡೆಯುವದರಿಂದ ಆಯಾ ಜಾತಿಗಳಿಗೆ ಹಿತಕ್ಕಿಂತ ಅಹಿತವೇ ಹೆಚ್ಚಾಗುವದೆಂದು ಸಮಂಜಸ ವೃತ್ತಿಯವರೆಲ್ಲ ಹೇಳುತಿರುವರು. ಮುಸ್ಲಿಂ ಲೀಗಿನ ಪಾಕಿಸ್ತಾನ ಯೋಜನೆಯಂತೆ ಶೀಖರು ಶೀಖಿಸ್ತಾನವನ್ನು ಬೇಡಿದರೆ ದ್ರವಿಡರು ದ್ರಾವಿಡಸ್ತಾನವನ್ನು ಬೇಡಿದರೆ ಹಿಂದುಸ್ತಾನ ಹರಿದು ಹಂಚಿಹೋಗಿ ಅತ್ಯಂತ ದುರ್ಬಲರಾಷ್ಟ್ರವಾಗಿ ಪರಿಣಮಿಸುವದು. ಸದ್ಯಕ್ಕೆ ಅದಕ್ಕಿದ್ದ ಸ್ಥಾನಮಾನಗಳು ಅಳಿಯುವವು. ಶೀಖರನ್ನು ಶೀಖಿಸ್ಥಾನಕ್ಕಾಗಿ ಒಡೆದುಕೊಳ್ಳಬೇಕೆಂಬ ಪ್ರಯತ್ನ ನಡೆಯಿತು. ಅದರೆ ರಾಷ್ಟ್ರೀಯ ವೃತ್ತಿಯವರಾದ ಶೀಖರು ಇದಕ್ಕೊಪ್ಪಲಿಲ್ಲ. ಹಿಂದುಸ್ತಾನದಲ್ಲಿಯೇ ಉಳಿಯುವುದು ತಮಗೂ ರಾಷ್ಟ್ರಕ್ಕೂ ಹಿತಕರವೆಂದು ಅವರು ಹೇಳುತಿರುವರು. ಶೀಖರ ಮುಖಂಡರಾದ ಕರ್ನಲ್ ನಿರಂಜನಸಿಂಗರು ಸುದಿಗಾರರ ಸಮ್ಮೇಲದನಲ್ಲಿ ಶೀಖರ ಧೋರಣವನ್ನು ಸ್ಪಷ್ಟೀಕರಿಸುತ್ತ ಶೀಖರಿಗೆ ಪಾಕಿಸ್ತಾನವೂ ಬೇಡ ಶೀಖಿಸ್ತಾನವೂ ಬೇಡ ಜಾತಿಭೇದವನ್ನುಂಟು ಮಾಡುವ ಯಾವ ಸ್ಥಾನವೂ ಬೇಡ. ಶೀಖರು ಯಾವಾಗಲೂ ಜಾತೀಯ ಸಂಗಡಗಳಿಂದ ಅಲಿಪ್ತವಾದ ಕಾಂಗ್ರೆಸಿಗೆ ತಮ್ಮ ಬೆಂಬಲವನ್ನು ಕೊಡುತ್ತ ಬಂದಿದ್ದಾರೆಂದು ಹೇಳಿದರು. ಶೀಖ ಧುರೀಣರ ಈ ಮಾತು ಅತ್ಯಂತ ಮಹತ್ವದ್ದಾಗಿದ್ದು ಹಿಂದುಸ್ತಾನದಲ್ಲಿಯ ಬೇರೆ ಬೇರೆ ಜಾತಿಯ ಜನಗಳು ಮನ್ನಿಸುವಂತಹದಿದೆ. ಹಿಂದುಸ್ತಾನವು ಅಖಂಡವಾಗಿದ್ದು ಅದರಲ್ಲಿ ಸಂಯುಕ್ತ ಮತದಾರ ಸಂಘಗಳಿರಬೇಕು. ಮುಸಲ್ಮಾನ ಬಹುಸಂಖ್ಯಾಕ ಪ್ರಾಂತಗಳಿಗೆ ಸ್ವಯಂನಿರ್ಣಯ ಅಧಿಕಾರವನ್ನು ಕೊಟ್ಟು ಅವರ ಅಂಜಿಕೆಯನ್ನು ಹೋಗಲಾಡಿಸಬೇಕೆಂದೂ ಅವರು ಅಭಿಪ್ರಾಯ ಪಟ್ಟರುವರು.

### ಸುಭಾಸರು ಬರುವರು

ಸುಭಾಸಚಂದ್ರರು ಜೀವಂತ ಇದ್ದು ಹಿಂದುಸ್ತಾನವನ್ನು ಪರದಾಸ್ಯದಿಂದ ಮುಕ್ತ ಮಾಡಲು ಕೊನೆಯ ಕ್ರಾಂತಿಗಾಗಿ ಯೋಗ್ಯ ಕಾಲಕ್ಕೆ ಪುನಃ ಪ್ರಕಟವಾಗುವರು ಎಂದು ಅಖಿಲ ಭಾರತ ಪುರೋಗಾಮಿ ಪಕ್ಷದ ಕಾರ್ಯಕಾರೀ ಸಮಿತಿಯವರು ಸಾರಿರುವರು. ಸುಭಾಸಚಂದ್ರರ ನೇತೃತ್ವದಲ್ಲಿ ಹೋರಾಡಲು ದೇಶವನ್ನು ಅಣಿಗೊಳಿಸಲು ಪುರೋಗಾಮಿ ಗುಂಪುಗಳಿಗೆ ಕೇಳಿಕೊಳ್ಳುವ ಗೊತ್ತುವಳಿಯನ್ನು ಈ ಕಾರ್ಯಕಾರೀ ಮಂಡಲದವರು ಸ್ವೀಕರಿಸಿರುವರು. ಬಿಜಾಪುರದ ರಾಮಕೃಷ್ಣ ಸಿದ್ಧಾಂತಿಗಳು ಈ ಸಂಬಂಧದಲ್ಲಿ ಈ ರೀತಿ ಭವಿಷ್ಯವನ್ನು ಹೇಳಿರುವರು. ಭಾರತದ ಶ್ರೇಷ್ಠ ವಿಭೂತಿಗಳು (ಸುಭಾಸರು) ಅಜ್ಞಾತವಾಸದಿಂದ ಅಕ್ಟೋಬರ ಕೊನೆಯ ಒಳಗಾಗಿ ಪ್ರಕಟವಾಗುವರು. ೧೯೪೭ ನೇ ಫೆಬ್ರುಅರಿಯೊಳಗಾಗಿ ಭಿನ್ನ ಭಿನ್ನ ಜಾತೀಯ ಗುಂಪುಗಳ ಸಭೆ ಸೇರಿ ಒಪ್ಪಂದಕ್ಕೆ ಬರುವವು. ಆ ಮೇಲೆ ಭಾರತದಲ್ಲಿ ಸಮ್ಮಿಶ್ರಮಂತ್ರಿಮಂಡಳವಾಗುವದು. ಅದಕ್ಕೆ ಹೆಚ್ಚಿನ ಅಧಿಕಾರಗಳೂ ಪ್ರಾಪ್ತವಾಗುವವು. ಅಂದಿನಿಂದ ಭಾರತದ ರಾಜಕೀಯ ರಂಗದಲ್ಲಿ ಶಾಂತತೆ ನೆಲೆಸುವದು.

---

(೩ನೇ ಪುಟದಿಂದ)

ಪ್ರತಿನಿಧಿಗಳನ್ನಾಗಿಯೂ ಸರಕಾರಗಳಿಂದ ನಾಲ್ವರು ಪಂಡಿತರು ಹಾಗು ತಜ್ಞರನ್ನು ನಿರೀಕ್ಷಕರನ್ನಾಗಿಯೂ ಕಳಿಸಬೇಕೆಂದು ಕೇಳಲಾಗುವದು. ಜನಾಂಗಗಳಲ್ಲಿಯ ತಿಕ್ಕಾಟ, ಆರ್ಥಿಕ ಸಹಕಾರ, ಔದ್ಯೋಗಿಕ ಅಭಿವೃದ್ಧಿ ಕೂಲಿಕಾರರ ಹಿತಚಿಂತನ, ಸ್ತ್ರೀಯರ ಸ್ಥಾನಮಾನ ಮೊದಲಾದ ವಿಷಯಗಳ ವಿಚಾರ ಈ ಪರಿಷತ್ತಿನಲ್ಲಿ ನಡೆಯುವದು. ಇತ್ತೀಚೆ ಪ್ರಬಲ ರಾಷ್ಟ್ರಗಳು ಸ್ವಾರ್ಥಪ್ರೇರಿತವಾಗಿ ದುರ್ಬಲ ರಾಷ್ಟ್ರಗಳನ್ನು ಆಕ್ರಮಿಸಲು ಹವಣಿಸುತಿರುವದರಿಂದ ಜನಾಂಗಗಳಲ್ಲಿ ತಿಕ್ಕಾಟ ಒಂದೇ ಸವನೆ ನಡೆದಿದೆ. ಇದರಿಂದ ಜಗತ್ತಿನಲ್ಲಿ ಶಾಂತಿ ಸುವ್ಯವಸ್ಥೆ ಉಳಿಯದಂತಾಗಿದೆ. ಇದನ್ನು ತಿಳಿದೆ ಅಂತರ್‌ರಾಷ್ಟ್ರೀಯ ಪರಿಷತ್ತುಗಳನ್ನು ಕೂಡಿಸಿ ವಿವಿಧ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಬೇಕೆಂದು ಪ್ರಯತ್ನಿಸುತಿರುವರು. ಪಂಡಿತ ಜವಾಹರಲಾಲರು ಕರೆದ ಈ ಪರಿಷತ್ತು ಎಲ್ಲ ರೀತಿಯಿಂದ ಉಚಿತವಾಗಿದ್ದು ಆಯಾ ರಾಷ್ಟ್ರಗಳ ಪ್ರತಿನಿಧಿಗಳು ಪರಿಷತ್ತಿಗೆ ಬಂದು ವಿಚಾರವಿನಿಮಯದಲ್ಲಿ ಭಾಗವಹಿಸಿ ಪರಿಷತ್ತು ಕರೆದುದರ ಉದ್ದೇಶವನ್ನು ಸಾಧಿಸಬೇಕೆಂದು ಕೇಳಿಕೊಳ್ಳುತ್ತೇವೆ.

ಮುಂಬಯಿ ಶಾಸನ ಸಭೆ

# ಹೊಲಸಾಗುವಳಿ ಮಸೂದೆಯು ೩ ನೆ ವಾಚನ ಸ್ವೀಕಾರ

## ಪೋಲೀಸ ಕಾಯದೆಯಲ್ಲಿ ತಿದ್ದುಪಡಿ

ಕಳೆದ ಹಲವು ದಿನಗಳಿಂದ ದೀರ್ಘ ಚರ್ಚೆಯ ವಸ್ತುವಾಗಿದ್ದ ಮುಂಬಯಿ ಹೊಲಸಾಗುವಳಿ ತಿದ್ದುಪಡಿ ಮಸೂದೆಯು ಮೂರನೆ ವಾಚನ ಮೊನ್ನೆ ತಾ. ೧೩ಕ್ಕೆ ಪ್ರಚಂಡ ಬಹುಮತದಿಂದ ಮುಂಬೈ ಶಾಸನ ಸಭೆಯಲ್ಲಿ ಸ್ವೀಕೃತವಾಯಿತು.

ಈ ಮಸೂದೆಗೆ ನೂರಕ್ಕೆ ಮೇಲ್ಪಟ್ಟು ತಿದ್ದುಪಡಿಗಳು ಮಂಡಿಸಲ್ಪಟ್ಟಿದ್ದವು. ಅವುಗಳಲ್ಲಿ ಕೆಲವು ಮಾತ್ರ ಮಹತ್ವದವಿದ್ದವು. ಜಮೀನದಾರ ಪ್ರತಿನಿಧಿಗಳೂ ಲೀಗ ಸದಸ್ಯರೂ ಹಿಂದೂ ಮಹಾಸಭೆಯ ಶೀ. ಲ. ಕರಂದೀಕರರೂ ಜಮೀನದಾರರ ಹಿತಸಂಬಂಧಗಳನ್ನು ರಕ್ಷಿಸುವ ಸಲುವಾಗಿ ಬಹಳ ಸಾಹಸದಿಂದ ಹೋರಾಡಿದರು. ಆದರೆ ಅವರೆಲ್ಲರ ಪ್ರಯತ್ನಗಳು ನಿಷ್ಫಲವಾದವು.

ಮುಖ್ಯ ತಿದ್ದುಪಡಿಗಳು (೧) ಸ್ವಂತ ಸಾಗುವಳಿಗೆ ರೈತನಿಂದ ಭೂಮಿ ಬಿಡಿಸಬೇಕೆಂಬ ಒಡೆಯರು ಕೊಡಬೇಕಾದ ನೋಟೀಸಿನ ೧ ವರ್ಷದ ಅವಧಿಯನ್ನು ಕಡಿಮೆ ಮಾಡಲು (೨) ಸ್ವಂತ ಸಾಗುವಳಿಗಾಗಿ ಒಡೆಯರಿಗೆ ೧೦ ವರ್ಷದ ಕರಾರಿನ ರೈತನಿಂದಲೂ ಭೂಮಿ ಬಿಡಿಸಿಕೊಳ್ಳುವ ಅವಕಾಶ ದೊರಕಿಸಲು (೩) ಲಾವಣಿಗಾಗಿ ಗೊತ್ತುಪಡಿಸಿದ ೧೩ ಮತ್ತು ೧೪ ಪರಮಾವಧಿಯನ್ನು ಹೆಚ್ಚಿಸಲು (೪) ಸಣ್ಣ ಒಡೆಯರನ್ನು ಈ ಮಸೂದೆಯಿಂದ ಮುಕ್ತಮಾಡಲು ಪ್ರಯತ್ನಿಸಿದ್ದವು. ಆದರೆ ಈ ಎಲ್ಲ ಪ್ರಯತ್ನಗಳಿಗೂ ಮುರಾರಜಿ ದೇಸಾಯರು ನಿದಾರ್ಕ್ಷಿಣ್ಯ ಉತ್ತರ ಕೊಟ್ಟರು.

### ಪೋಲೀಸ ಕಾಯಿದೆ ತಿದ್ದುಪಡಿ

ಪುಂಡರನ್ನು ಹತ್ತಿಕ್ಕುವ ಬಗ್ಗೆ ಮುಂಬಯಿ ಮಂತ್ರಿಮಂಡಲದವರು ಮುಂಬಯಿ ಜಿಲ್ಹಾ ಪೋಲೀಸ ಕಾಯಿದೆಯನ್ನು ತಿದ್ದುಪಡಿಮಾಡಲು ಮಂಡಿಸಿದ ಮಸೂದೆಯ ಪ್ರಥಮ ವಾಚನ ತಾ. ೧೬ ಕ್ಕೆ ಸ್ವೀಕೃತವಾಯಿತು. ಪುಂಡರನ್ನು ಹತ್ತಿಕ್ಕುವದಕ್ಕಿಂತಲೂ ಸರಕಾರದ ಭದ್ರತೆಯನ್ನು ಹೆಚ್ಚಿಸಿಕೊಳ್ಳಲು ಸರಕಾರದವರು ಈ ಮಸೂದೆಯನ್ನು ತಂದಿದ್ದಾರೆಂದು ವಿರೋಧಿ ಪಕ್ಷದವರು ಟೀಕಿಸಿದರು. ಆದರೆ ಪುಂಡತನವನ್ನು ನಿಲ್ಲಿಸಿ ನಾಗರಿಕರಿಗೆ ರಕ್ಷಣೆ ಕೊಡಬೇಕಾದರೆ ಪೋಲೀಸರಿಗೂ ಮ್ಯಾಜಿಸ್ಟ್ರೇಟರಿಗೂ ಹೆಚ್ಚು ಅಧಿಕಾರ ಕೊಡಲೇಬೇಕಾಗಿದೆಯೆಂದು ಮುರಾರಜಿಯವರು ಸಾಧಿಸಿದರು. ಪುಂಡರನ್ನು ಜಿಲ್ಹೆಯಿಂದ ಹೊರಗೆ ಹಾಕುವದೇ ಮೊದಲಾದ ಅಧಿಕಾರಗಳನ್ನು ಈ ಮಸೂದೆ ಮ್ಯಾಜಿಸ್ಟ್ರೇಟರಿಗೆ ಕೊಡುತ್ತದೆ. ಆದೆರೆ ರಾಜಕೀಯ ವಿರೋಧಿಗಳನ್ನು ಮುರಿಯಲು ಈ ಮಸೂದೆ ತರಲಾಗಿದೆಯೆಂದು ಲೀಗ್ ಪಕ್ಷದವರು ಅಪಾದಿಸಿದ್ದಾರೆ. ಎರಡನೆ ವಾಚನವೀಗ ನಡೆದಿದ್ದು ತುರುಸಿನ ಚರ್ಚೆಯಾಗುತಿದೆ.

### ರಾಷ್ಟ್ರೀಯ ಮುಸ್ಲಿಮರಿಗೆ ರಕ್ಷಣೆ

ರಾಷ್ಟ್ರೀಯ ಮುಸ್ಲಿಮರನ್ನು ಲೀಗ್ ಮುಸ್ಲಿಮರು ಪೀಡಿಸುತಿರುವದು ಮುಂಬಯಿ, ಅಹಮದಾಬಾದ ಮೊದಲಾದೆಡೆಗಳಲ್ಲಿ ಸರಕಾರದ ಲಕ್ಷಕ್ಕೆ ಬಂದಿರುವದರಿಂದ ಅವರಿಗೆ ಸಂರಕ್ಷಣೆ ಕೊಡಲು ಸರಕಾರ ಸಂಬಂಧಪಟ್ಟ ಅಧಿಕಾರಿಗಳಿಗೆ ಅಜ್ಞೆ ಹೊರಡಿಸಿದೆಯೆಂದು ಶಾಸನ ಸಭೆಯಲ್ಲಿ ಪ್ರಶ್ನೋತ್ತರ ಕಾಲದಲ್ಲಿ ತಿಳಿಸಲಾಯಿತು.

### ಮುಂಬಯಿ ಮೇಲ್ಮನೆಯಲ್ಲಿ

ಮುಂಬಯಿ ಮೇಲ್ಮನೆಯಲ್ಲಿ ತಾ. ೧೭ ಕ್ಕೆ ಪುರವಣಿ ಬೇಡಿಕೆಗಳು ಬಂದಾಗ ಶ್ರೀ ಜಿ. ಎಸ್. ಮಹಾಜನಿಯವರು ಖಾಸಗಿ ಕಾಲೇಜುಗಳಿಗೆ ಹೆಚ್ಚು ಧನಸಹಾಯವನ್ನು ಬೇಡಿದರು. ಅದಕ್ಕೆ ಉತ್ತರ ಕೊಡುತ್ತ ಮುಖ್ಯ ಮಂತ್ರಿ ಬಾಳಾಸಾಹೇಬ ಖೇರರು ಸಿರಿವಂತ ಮತ್ತು ಉಚ್ಚ ವರ್ಗದವರ ಮಕ್ಕಳ ಶಿಕ್ಷಣಕ್ಕಾಗಿ ಹೆಚ್ಚು ಹಣವನ್ನು ವೆಚ್ಚಮಾಡುವದರ ಬದಲು ಪ್ರಾಥಮಿಕ ಶಿಕ್ಷಣವನ್ನು ಹೆಚ್ಚು ಪ್ರಸಾರ ಮಾಡುವದು ಸರಕಾರದ ಕರ್ತವ್ಯವಾಗಿದೆಯೆಂದು ಸಾರಿದರು. ಎಂಜಿನಿಯರಿಂಗ, ಒಕ್ಕಲತನ, ವೈದ್ಯಕೀಯ ಕಾಲೇಜುಗಳಿಗೆ ಹೆಚ್ಚಿನ ಮಹತ್ವ ಕೊಡಲಾಗುವದೆಂದೂ ಅವರು ತಿಳಿಸಿದರು.

೧೯೪೨ ರ ಗಲಭೆಗಳಲ್ಲಿ ಪ್ರಾಂತದಲ್ಲಿ ೧೦೩ ಜನರು ಗೋಳಿಬಾರಿಗೆ ಆಹುತಿಯಾದರೆಂದೂ ಸಾತಾರಾ ಜಿಲ್ಹೆಯಲ್ಲಿ ಈಗ ಭಯೋತ್ಪಾದಕರ ಚಟುವಟಿಕೆಯಿಲ್ಲವೆಂದೂ ಪ್ರಶ್ನೋತ್ತರ ಸಮಯದಲ್ಲಿ ತಿಳಿಸಲಾಯಿತು.

ನಿತ್ಯೋಪಯೋಗಿ ವಸ್ತುಗಳ ಮತ್ತು ದನಗಳ ನಿಯಂತ್ರಣ ಮಸೂದೆಯನ್ನೂ ಮುಂಬಯಿ ವಿಶೇಷ ಟ್ರಾಯಬ್ಯುನಲ್ಸ ಮಸೂದೆಯನ್ನೂ ಮಾನ್ಯಮಾಡಿ ವಿಧಿಮಂಡಲ ತಾ. ೨೩ ಕ್ಕೆ ಮುಂದುವರಿಯಿತು.

---

# ಮುಂಬಯಿಯಲ್ಲಿ ಪುನಃ ಗಲಭೆ

## ಓಡುವ ಕಾರಿನಿಂದ ಕಿಡಿಗೇಡಿಗಳ ಗೋಳೀಬಾರು

### ಅಹಮದಾಬಾದ, ಡಾಕಾಗಳಲ್ಲಿಯೂ ಹಿಂಸಾಚಾರ

ಮುಂಬಯಿಯಲ್ಲಿ ದಂಗೆಯ ಪರಿಸ್ಥಿತಿ ಶಾಂತವಾಗುತ್ತ ಬಂದಿದ್ದಾಗ ಕಳೆದ ಶನಿವಾರ ಮತ್ತೆ ಅದು ಉರಿದೇಳುವಂತೆ ಭೀಕರ ಅತ್ಯಾಚಾರವೊಂದು ನಡೆಯಿತು. ಪಠಾಣರೆಂದು ನಂಬಲಾದ ನಾಲ್ವರು ಒಂದು ಟ್ಯಾಕ್ಸಿಯಲ್ಲಿ ರಭಸದಿಂದ ಸಾಗುತ್ತ ಮಶೀನ್‌ಗನ್ನಿನಿಂದ ಸಿಕ್ಕಸಿಕ್ಕಂತೆ ಗೋಳಿಬಾರು ಮಾಡುತ್ತ ಕಾಲಬಾದೇವಿ ಭಾಗದಲ್ಲಿ ದಿಗಿಲನ್ನುಂಟುಮಾಡಿದರು. ಒಂದು ಬ್ಯಾಂಕಿನ ಕಟ್ಟಡದ ಮುಂದೆ ಅವರು ಮೋಟಾರು ನಿಲ್ಲಿಸಿ ಅನೇಕ ಸುತ್ತು ಗುಂಡು ಹಾರಿಸಿದ್ದರಿಂದ ಅನೇಕರಿಗೆ ಗಾಯವಾಗಿ ನಾಲ್ವರು ಸತ್ತರು. ಅನಂತರ ಅವರು ಅಲ್ಲಿಂದ ಧಾವಿಸಿ ಮೂರು ಮೈಲಿ ದೂರದಲ್ಲಿ ಟ್ಯಾಕ್ಸಿಯನ್ನು ಬಿಟ್ಟು ಮರೆಯಾದರು. ಈ ಟ್ಯಾಕ್ಸಿ ಅವರದಾಗಿರದೆ ೬೦ ವರ್ಷ ವಯಸ್ಸಿನ ಒಬ್ಬ ಡ್ರಾಯವರನದಾಗಿತ್ತೆಂದೂ ಅವನ ಮಗನನ್ನು ಕೊಂದು ಅವನನ್ನು ರಸ್ತೆಯಲ್ಲಿ ಕೆಡಹಿ ಅವರು ಕಾರನ್ನು ಹತ್ತಿ ಧಾವಿಸಿದರೆಂದೂ ಹಿಂದುಗಡೆ ತಿಳಿದು ಬಂತು.

ಈ ಸಂಬಂಧದಲ್ಲಿ ಬಾಯಕಲಾ ಭಾಗದಲ್ಲಿ ಒಂದು ಗುಪ್ತ ಕೋಣೆಯಲ್ಲಿದ್ದ ನಾಲ್ವರು ಪಠಾಣರನ್ನು ಅನೇಕ ಶಸ್ತ್ರಾಸ್ತ್ರಗಳೊಡನೆ ಬಂಧಿಸಲಾಗಿದೆ. ಅವರಿಗೆ ಆಯುಧಗಳನ್ನು ಮಾರಿದ ಸಂಶಯದಿಂದ ಒಬ್ಬ ಕ್ರಿಶ್ಚಿಯನ್ ಮತ್ತು ಇನ್ನೊಬ್ಬ ಪಾರ್ಸಿ ಮಿಲಿಟರಿ ಜನರನ್ನು ಬಂಧಿಸಲಾಗಿದೆ.

ಈ ಘಟನೆಯಿಂದ ಪುನಃ ಪರಿಸ್ಥಿತಿ ಪ್ರಕ್ಷುಬ್ಧವಾಗಿ ಇರಿತಗಳೂ ಹೆಚ್ಚಿದವು. ಮತ್ತು ಕೆಲವರು ಸತ್ತರು. ತಾ. ೧೮ ಸಂಜೆ ಹೊತ್ತಿಗೆ ಪರಿಸ್ಥಿತಿ ಸ್ವಲ್ಪ ಶಾಂತವಾಗಿತ್ತು.

ಕರ್ಫ್ಯೂ ಅಜ್ಞೆಯ ಅವಧಿ ಬೆಳೆಸಲಾಗಿದೆ.

ಅಹಮದಾಬಾದದಲ್ಲಿಯೂ ಗಲಭೆ ಹೆಚ್ಚಿ ೫ ಜನರು ಸತ್ತಿದ್ದಾರೆ.

ಜಾತೀಯ ಗಲಭೆಗಳನ್ನು ನಿಲ್ಲಿಸಲು ಉಗ್ರೋಪಾಯಗಳನ್ನು ಕೈಕೊಳ್ಳುವ ವಿಚಾರ ಮುಂಬಯಿ ಮಂತ್ರಿಮಂಡಲದ ಪರಿಶೀಲನೆಯಲ್ಲಿದ್ದು ದಂಗೆಗಾರರಿಗೆ ಛಟಕಿ ಶಿಕ್ಷೆಯ ಕಲಮನ್ನು ಅನ್ವಯಿಸಬೇಕೆಂದಿದ್ದಾರೆ.

### ಬಂಗಾಲದಲ್ಲಿ

ಪೂರ್ವ ಬಂಗಾಲದ ಡಾಕಾ ಮೊದಲಾದೆಡೆಗಳಲ್ಲಿ ಉಗ್ರ ಗಲಭೆಗಳು ನಡೆದಿವೆ. ಡಾಕಾದಲ್ಲಿ ಮೊನ್ನೆ ಒಬ್ಬ ಶ್ರೀಮಂತರ ಮನೆಯ ಆಳನ್ನೂ ಅವನು ಆಡಿಸುತಿದ್ದ ಸಣ್ಣ ಕೂಸನ್ನೂ ಇರಿಯಲಾಯಿತು. ಕಲಕತ್ತೆಯಲ್ಲಿಯೂ ಅಲ್ಲಲ್ಲಿ ಇರಿತಗಳಾದವು.

## ಬೆಂಗಳೂರು-ಮೈಸೂರು

ಪರಿಸ್ಥಿತಿಯನ್ನನುಲಕ್ಷಿಸಿ ಬೆಂಗಳೂರು ನಗರದಲ್ಲಿ ಪೋಲೀಸು ಪಡೆಯನ್ನು ಹೆಚ್ಚಿಸುವ ವಿಷಯು ಸರಕಾರದ ಪರ್‍ಯಾಲೋಚನೆಯಲ್ಲಿದೆಯೆಂದು ಸುದ್ದಿಯಿದೆ.

ಬೆಂಗಳೂರು ಬನಪ್ಪ ಪಾರ್ಕಿನಲ್ಲಿ ನಗರ ಕಾಂಗ್ರೆಸ್ ಸಮಿತಿಯು ಆಶ್ರಯದಲ್ಲಿ ಕಾಂಗ್ರೆಸ್ ಅಧ್ಯಕ್ಷ ನಿಜಲಿಂಗಪ್ಪನವರು ಈಚೆಗೆ ಮೈಸೂರು ದಿವಾಣರು ಘಟನಾ ಸಮಿತಿಗೆ ಮೈಸೂರಿನ ಪ್ರಾತಿನಿಧ್ಯವನ್ನು ಕುರಿತು ವ್ಯಕ್ತಗೊಳಿಸಿದ ಧೋರಣೆಯನ್ನು ಖಂಡಿಸಿ ಪ್ರಜಾಹಿತಕ್ಕೆ ಗಂಡಾಂತರ ತರುವ ಧೋರಣೆಯನ್ನು ಅನುಸರಿಸಿದರೆ ಕಾಂಗ್ರೆಸ್ಸು ಯಾವಾಗಲೂ ಹೋರಾಟಕ್ಕೆ ಸಿದ್ಧವಾಗಿದೆಯೆಂದು ಎಚ್ಚರಿಕೆಯಿತ್ತರು.

ಹಿಂದುಸ್ಥಾನ ಸರಕಾರದ ಆಹಾರ ಮಂತ್ರಿ ಡಾ. ರಾಜೇಂದ್ರ ಪ್ರಸಾದರು ಅಕ್ಟೋಬರ ೧ನೆಯ ಕ್ಕೆ ಬೆಂಗಳೂರಿಗೆ ಬಂದು ಮೈಸೂರ ಸಂಸ್ಥಾನದ ಆಹಾರ ಪರಿಸ್ಥಿತಿಯನ್ನು ಕುರಿತು ದಿವಾಣರೊಡನೆ ಮಾತುಕತೆ ನಡೆಸುವರು.

ಮೈಸೂರಿಗೆ ಕೊಡನಾಡಿದ್ದ ೬೦೦೦ ಟನ್ ಅಕ್ಕಿಯನ್ನು ಮದ್ರಾಸ ಮತ್ತು ತಿರ್ವಾಂಕೂರು ಸಂಸ್ಥಾನಕ್ಕೆ ಹೊರಳಿಸಿದ್ದಕ್ಕಾಗಿ ಹಿಂದುಸ್ಥಾನ ಸರಕಾರಕ್ಕೆ ನಿಷೇಧವನ್ನು ಮೈಸೂರ ಸರಕಾರದವರು ಕಳಿಸಿದ್ದಾರೆ. ಮೈಸೂರಿನ ಆಹಾರ ಪರಿಸ್ಥಿತಿ ಚನ್ನಾಗಿಲ್ಲವೆಂದೂ ನೆರೆಪ್ರಾಂತವಾದ ಮದ್ರಾಸಿಗಿಂತ ಇಲ್ಲಿ ಅಕ್ಕಿ ಸೀದಾ ಪ್ರಮಾಣ ಕಡಿಮೆಯುಂಟೆಂದೂ ಆಹಾರ ಮಂತ್ರಿ ಶರೀಫರು ಹೇಳುತ್ತಾರೆ.

ತಾ ೧೧ನೇ ದಿನ ಮೈಸೂರು ದಿವಾಣರಾದ ಸರ್ ಅರ್ಕಾಟ ರಾಮಸ್ವಾಮಿ ಮುದಲಿಯಾರರು ಮಹಾರಾಣಿ ಕಾಲೇಜಿನ ಸಂಘದ ಉದ್ಘಾಟನೋತ್ಸವವನ್ನು ನೇರವೇರಿಸುತ್ತ ಮಹಿಳೆಯರ ಪ್ರಗತಿಯೇ ಕಾಲಗತಿಯ ಅಳತೆಗೋಲೆಂದು ಹೇಳಿದರು. ಅವರು "ಜಗತ್ತಿನ ಮೂಲೆ ಮೂಲೆಯಲ್ಲಿ ಸುತ್ತುವ" ತಮ್ಮ ಸುಯೋಗವನ್ನುಲ್ಲೇಖಿಸಿ ತಮ್ಮ ಅನುಭವಗಳನ್ನು ವಿವರಿಸಿದರು. ಇವು ಭಾರತದ ಭವ್ಯ ದಿನಗಳು, ತರುಣರ ಸತ್ವಪರೀಕ್ಷೆಯ ದಿನಗಳೆಂದು ಅವರು ಹೇಳಿ ಸ್ವಾರ್ಥಿಗಳಾದ ಬಹುರೂಪಿಗಳ ಕೈವಾಡಕ್ಕೊಳಗಾಗದಿರಬೇಕೆಂದು ತರುಣರಿಗೆ ಬಿನ್ನವಿಸಿಕೊಂಡರು.

ಮೈಸೂರು ಸಂಸ್ಥಾನದ ಹಿತದೃಷ್ಟಿಯಿಂದ ಆದರಲ್ಲಿಯೂ ಮಲೆನಾಡ ಬೆಳವಣಿಗೆಯ ದೃಷ್ಟಿಯಿಂದ ಭಟಕಳ ಬಂದರದ ಅಭಿವೃದ್ಧಿಯಾಗುವದು ತೀರ ಅವಶ್ಯವಾಗಿದೆಂದು ಮಲೆನಾಡು ಬೆಳವಣಿಗೆ ಸಮಿತಿಯವರು ತಮ್ಮ ವರದಿಯನ್ನು ಪ್ರಸಿದ್ಧಿಸಿದ್ದಾರೆ.



## ವ್ಯಾಪಾರ ಪ್ರಪಂಚ

### ಮುಂಬಯಿ ಶೇರ ಪೇಟೆ

ತಾ ೧೮— ಮುಂಬಯಿ ಶೇರ ಪೇಟೆಯಲ್ಲಿ ಕಳೆದ ಕೆಲದಿನಗಳಲ್ಲಾದ ಬೆಲೆಗಳ ಅಧಃಪಾತದಿಂದ ನಾಲ್ವರು ದೊಡ್ಡ ವ್ಯಾಪಾರಿಗಳು ತಮ್ಮ ಹೊರಬಾಕಿಯನ್ನು ಪೂರ್ಣ ಸಲ್ಲಿಸಲಾರದೆ ದಿವಾಳಿತೆಗೆದರು. ಮುಂಬಯಿ ದಂಗೆ, ಗಿರಣಿಗಳಲ್ಲಿ ಮತ್ತು ಟಾಟಾ ಕಾರಖಾನೆಯಲ್ಲಿ ಸಂಪಿನ ಭಯ. ಮೊದಲಾದವುಗಳು ಬಹಳ ಗಾಬರಿಗೆ ಕಾರಣವಾಗಿ ರಭಸದ ಮಾರಾಟ ಪ್ರಾರಂಭವಾಯಿತು. ಟಾಟಾ ಸ್ಟೀಲ ಡೆಫರ್ಡ ಪಾಲುಗಳು ೩೦೦೦ಕ್ಕಿಂತ ಕೆಳಗಿಳಿದುದು ಸ್ವಲ್ಪ ಸುಧಾರಿಸಿದರೂ ಮತ್ತೆ ಬಿದ್ದು ಹೋಗಿ ಇಂದು ೨೯೫೫ರಲ್ಲಿ ಮುಕ್ತಾಯವಾಯಿತು. ಬಾಂಬೆ ಡಾಯಿಂಗ್ ಕೂಡ ಬಹಳ ಕಳೆದು ಕೊಂಡು ೨೭೬೫—೦—೦ ಕ್ಕಿಳಿದರೂ ಮುಂದೆ ೨೮೬೫—೦—೦ ಕ್ಕೆ ಸುಧಾರಿಸಿತು. ಇದೇ ಪ್ರಕಾರ ಇತರ ಜವಳಿ ಗಿರಣಿಗಳೂ ಬಹಳ ಇಳಿತಾಯದ ನಂತರ ಸುಧಾರಿಸಿವೆ. ೯೩೬-೦—೦ ಕ್ಕೆ ಹೋಗಿದ್ದ ಕೋಹಿನೂರು ೯೪೮—೦—೦ ಕ್ಕೂ, ೭೫೦—೦—೦ ರಲ್ಲಿದ್ದ ಸ್ವದೇಶಿ ೭೫೮—೦—೦ ಕ್ಕೂ, ೪೩೨—೦—೦ ರಲ್ಲಿದ್ದ ಸಂಪ್ಲೆಕ್ಸ ೪೩೫—೦—೦ ಕ್ಕೂ ಸುಧಾರಿಸಿವರೆ ಗೋಕಾಕ ೪೧೦—೦—೦ ರಿಂದ ೪೦೮—೦—೦ ಕ್ಕೆ, ಸೆಂಚೂರಿ ೧೩೦೦—೦—೦ ರಿಂದ ೧೨೦೦—೦—೦ ಕ್ಕೆ ಇಳಿದವು. ಸಿಂಧ್ಯ ಸ್ಟೀಮ ೪೭—೧೨—೦ ಕ್ಕೆ ಅಸೋಸಿಯೇಟೆಡ್ ಸಿಮೆಂಟ್ಸ ೨೪೩—೮—೦ ಕ್ಕೆ ಇಳಿದವು.

ಬ್ಯಾಂಕುಗಳಲ್ಲಿ ಸೆಂಟ್ರಲ ಮತ್ತಷ್ಟು ಕುಸಿದು ೧೩೧—೦—೦ ಇಂಪೀರಿಯಲ್ ಎಸ್ ಸಿ ೨೮೭೦—೦—೦ ಕ್ಕೆ ಇಳಿದರೆ ರಿಝರ್ವ ೧೫೯—೦—೦ ರಸುತ್ತ ಸುಳಿಯುತಿದೆ.

ಸರಕಾರಿ ಸಾಲಪತ್ರಗಳು ಮತ್ತಷ್ಟು ಕಳೆದುಕೊಂಡವು. ಜಿ. ಪಿ. ನೋಟು ೧೦೩—೧೧—೦ ರಲ್ಲಿಯೂ ೧೯೪೭—೫೦ರ ೩॥ದರ ಸಾಲ ೧೦೨—೬—೦ರಲ್ಲಯೂ ಇದೆ.

### ಚಿನ್ನ—ಬೆಳ್ಳಿ

ಕಳೆದವಾರ ಚಿನ್ನದ ಬೆಲೆಗಳು ಏರಿಕೆ ತೋರಿಸಿದರೆ ಬೆಳ್ಳಿ ಇಳಿತ ತೋರಿಸಿತು. ರಶಿಯಾದ ಬೆಳ್ಳಿ ಬರುವದೆಂಬ ಊಹೆ ಇದಕ್ಕೆ ಕಾರಣವಾಗಿತ್ತು. ಚಿನ್ನ ಪೇಟೆಯಲ್ಲಿ ಕಡಿಮೆ ಇತ್ತು. ಆದರೆ ೧೦೦—೦—೦ರ ಮಟ್ಟದಾಟಿಹೋಗಿದ್ದ ಚಿನ್ನ ಮತ್ತೆ ಸ್ವಲ್ಪ ತಿರುಗಿ (ತಯಾರಿ) ೯೮-೦-೦ಕ್ಕಿಳಿದರೂ ಮತ್ತೆ ೯೯—೧೨—೦ಕ್ಕೆ ಸುಧಾರಿಸಿತು. ವಾಯದಾ ೯೭-೪-೦ ಸಾವರೀನ ೬೯-೦-೦ ಬೆಳ್ಳಿ ತಯಾರಿ ೧೬೪-೦-೦ ಕ್ಕಿಳಿದಿದೆ. ವಾಯದಾ ರೂ ೧೬೧-೮-೦

### ಅರಳೆಪೇಟೆ

ಅರಳೆ ಪೇಟೆಯ ಪರಿಶಿತ ಬಹಳವಾಗಿತ್ತು. ಆದರೆ ಗಿರಣಿಗಳು ಕೊಳ್ಳುವದು ಕಡಿಮೆಯಾಗಿ ಮುಂಬಯಿಯಲ್ಲಿ ದಂಗೆ ಪರಿಸ್ಥಿತಿಯಿಂದ ಗಿರಣಿಯ ಕೆಲಸದ ತಾಸುಗಳು ಕಡಿಮೆಮಾಡಲ್ಪಟ್ಟದ್ದರಿಂದ ವ್ಯಾಪಾರ ಕಡಿಮೆಯಾಗಿದೆ. ಹೀಗೆ ಸಪ್ಟಂಬರ ವಾಯಿದೆ ೪೨೦-೧೨-೦ ಕ್ಕಿಳಿದುದು ೪೨೪—೪—೦ ಕ್ಕೇರಿದರೂ ಮತ್ತೆ ೪೧೯-೮-೦ಕ್ಕೆ ತಗ್ಗಿತು. ಹೊಸ ಜನೇವರಿ ೪೪೦-೦-೦ ಕ್ಕೆ ಹೋಗಿ ೪೩೭-೧೨-೦ ಕ್ಕಿಳಿಯಿತು. ಮಾರ್ಚ ೪೪೪-೧೨-೦.

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೧೭-೦-೦ |
| ಅಗಸಿ | ೨೪-೫-೦ |
| ಅಗಸಿ ಎಣ್ಣೆ | ೧೫-೨-೦ |

### ಸಾಂಗಲಿ ಪೇಟೆ

| | |
|---|---|
| ಬೆಲ್ಲ ಬಂಗಾಲಿ ವ್ಮಣ ರೂ. | ೧೪-೧೬ |
| ಅರಿಷಣ ಹೇರು | ೮೨-೮೮ |
| ಶೇಂಗಾ ಖಂಡಿ ,, | ೧೨೫ |
| ಮೆಣಸಿನಕಾಯಿ ಹೇರು ,, | ೨೧೦-೩೩೫ |
| ದೇಶಿ ತಂಬಾಕು ಹೇರು | ೧೦೦-೨೦೦ |
| ತಂಬಾಕ ಪಂಢರಪುರಿ ,, | ೧೫೦-೨೫೦ |
| ತಂಬಾಕು ಅಕೋಳ(ಹೇರು) | ೨೫೦-೩೭೫ |

### ಶಿವಮೊಗ್ಗ

| | |
|---|---|
| ಅಡಿಕೆ ದೇಶಾವರ ನಂ ೧ ಮಣ ೧ಕ್ಕೆ | ೩೩-೩೫ |
| ,, ,, ೨ | ೩೦-೩೩ |
| ರಾಜಾ ಆಲವು | ೩೦-೩೩ |
| ನುಲಿ | ೩೩-೩೫ |
| ವಂತಿ | ೨೦-೨೩ |
| ಬೆಟ್ಟ | ೧೮-೨೧ |
| ಮೆಣಸು | ೨೧-೨೨ |

### ಹುಬ್ಬಳ್ಳಿ ಪೇಟೆ

| | | |
|---|---|---|
| ಜಯವಂತ ಹತ್ತಿ | ನಂ. ೧ | ೩೦೦-೩೦೫ |
| ,, | ನಂ. ೨ | ೨೯೦-೨೯೫ |
| ,, | ನಂ. ೩ | ೨೮೦-೨೮೫ |
| ಅಪ್ಲಂಡ ಹತ್ತಿ | | ೨೭೫-೨೮೫ |
| ಜಿನ | | ೨೨೦-೨೨೫ |
| ಸಾಜಿನ | | ೨೦೦ |
| ಡಬಲರೋಲ | | ೨೦೫-೨೧೫ |

## ದಕ್ಷಿಣ ಕನ್ನಡ

ಈಚೆಗೆ ನಡೆದ ಜಿಲ್ಹಾ ಕಾಂಗ್ರೆಸ ಸಮಿತಿಯ ಚುನಾವಣೆಗಳ ಸಂಬಂಧದಲ್ಲಿಯೂ ಜಿಲ್ಹಾ ಬೋರ್ಡ ಚುನಾವಣೆಗಳಲ್ಲಿ ಕಾಂಗ್ರೆಸ್ಸು ಅಧಿಕೃತವಾಗಿ ಭಾಗವಹಿಸ ಕೂಡದೆಂದು ಜಿಲ್ಹಾ ಕಾಂಗ್ರೆಸ್ಸು ನಿರ್ಣಯಿಸಿದ್ದರಿಂದಲೂ ಒಳ್ಳೆ ಪತ್ರಿಕಾ ವಾದವಿವಾದ ಪ್ರಾರಂಭವಾಗಿದೆ. ಜಿಲ್ಹಾ ಕಾಂಗ್ರೆಸಾ ಚುನಾವಣೆಗಳೆಲ್ಲ ಅ[illegible]ಥವಾಗಿ ಆಗಿವೆಯೆಂದು ಕಾಂಗ್ರೆಸ್ಸು ಪ್ರಕಟಿಸಿದ್ದನ್ನು ಪ್ರತಿಭಟಿಸಿ ನಾಮಪತ್ರವನ್ನು ಸಕಾಲದಲ್ಲಿ ಹಿಂತೆಗೆದುಕೊಳ್ಳದೆ ಮುಂದೆ ಹಿಂತೆಗೆದುಕೊಂಡ ಕೆಲ ಸಂದರ್ಭಗಳಲ್ಲಿಯೂ ಚುನಾವಣೆ ನಡೆಸದೆ ಅವಿರೋಧ ಆಯ್ಕೆಗಳನ್ನು ಜಾಹೀರು ಮಾಡಿದ್ದು ಅಕ್ರಮವೆಂದು ಅನೇಕರು ವಾದಿಸಕೊಡಗಿದ್ದಾರೆ.

ಮಂಗಳೂರಿನ ನವಭಾರತ ಪತ್ರಿಕೆಯ ಮುದ್ರಣಾಲಯದಲ್ಲಿ ತಾ॥೯ರಿಂದ ತುಟ್ಟಿಭತ್ತೆ ಮೊದಲಾದ ಬೇಡಿಕೆಗಳ ಸಂಬಂಧವಲ್ಲಿ ಕೂಲಿಕಾರ ಮುಷ್ಕರ ಪ್ರಾರಂಭವಾಗಿದೆ.

ಪುತ್ತೂರಿನಲ್ಲಿ ಕಳ್ಳಪೇಟೆಯ ವಿರುದ್ಧ ಕ್ರಮಗಳು ಪ್ರಾರಂಭವಾಗಿದ್ದು ಅನೇಕ ಅಂಗಡಿಗಳ ಝಡತಿಯನ್ನು ಪೋಲೀಸರು ನಡೆಸಿದ್ದಾರೆ. ಶ್ರೀ ವಾಯು ಮಹಾಲಿಂಗ ಕಿಣಿಯವರ ಅಂಗಡಿಯಲ್ಲಿ ಲೆಕ್ಕಮಿರೀದ ಕಬ್ಬಿಣ ಸಾಮುಗ್ರಿಗಳು ಸಿಕ್ಕಿದ್ದರಿಂದ ಇಬ್ಬರನ್ನು ಬಂಧಿಸಲಾಗಿದೆ.

ಕಾರವಾರ ಬಂದರದ ಬೆಳವಣಿಗೆ ಹಾಗು ಕಾರವಾರಕ್ಕೆ ರೈಲು ಸೌಕರ್ಯದ ಬಗ್ಗೆ ಯೋಜನೆ ಕೈಕೊಳ್ಳಬೇಕೆಂದು ಕೇಂದ್ರ ಸರಕಾರಕ್ಕೆ ವಿನಂತಿಸಬೇಕೆಂದು ೧೨ನೇ ತಾರೀಖು ಸೇರಿದ ನಾಗರಿಕರ ಸಭೆಯಲ್ಲಿ ನಿರ್ಣಯಿಸಲಾಯಿತು. ನಗರದಲ್ಲಿ ವಿದ್ಯುಚ್ಛಕ್ತಿಯನ್ನು ಮತ್ತು ಒಕ್ಕಲತನದ ಕಾಲೇಜೊಂದನ್ನು ಸ್ಥಾಪಿಸಲು ಪ್ರಾಂತಿಕ ಸರಕಾರವನ್ನು ಕೇಳಲಾಯಿತು.







# ಆಷಾಢ ಮಾಸದ ಕತೆಗಳು

—[ ಕಲಾ ಮಂಟಪ ಬೆಳಗಾವಿ ]—

ಈ ತಿಂಗಳ ೫೫ ಕತೆಗಳಲ್ಲಿ ಅನುವಾದವು ೬. ಉಳಿದವೆಲ್ಲ ಸ್ವತಂತ್ರವೆನ್ನಬಹುದು.

ಈಗ ಮೂರು ತಿಂಗಳಿನಿಂದ ಅವಲೋಕಿಸುತ್ತ ಬಂದ ಕತೆಗಳಿಗಿಂತ ಆಷಾಢದ ಕತೆಗಳು ದುರ್ಬಲವಾದವುಗಳು. ನಮ್ಮಲ್ಲಿ ಕಥಾಪ್ರಪಂಚ ಬೆಳೆಯುತ್ತಿದೆನ್ನುವ ಮಾತು ಸತ್ಯವೆನಿಸಿದರೂ ಅವುಗಳಲ್ಲಿ ಬೆಳೆಗಿಂತ ಕಳೆಯೇ ಹೆಚ್ಚಾಗಿ ಸೇರಿಕೊಂಡುಬರುತ್ತಿದೆ.

ಈ ಸಾರೆಯ ಪ್ರೇಮ ಕಾಮದ ಕತೆಗಳಲ್ಲಿಯ ನನ್ನ ಮಾಂಗಲ್ಯ, ತರುಣ ಸನ್ಯಾಸಿ, ದುಃಖದ ಪ್ರತಿಮೆ, ಬೀರಪ್ಪನ ದುರ್ದೆಸೆ, ಮುಗಿದ ಕತೆ ಮತ್ತು ಶಾರಿ ಒಂದೇ ಜಾತಿಯವು. ಗಂಡಸಿನ ಸ್ವಚ್ಛಂದವೃತ್ತಿಯೇ ಮೂಲ: ಈ ಮೂಲದ ಪರಿಣಾಮದಿಂದ ಒಬ್ಬ ಸನ್ಯಾಸಿಯಾಗುವ, ಒಬ್ಬಳು ದುಃಖದ ಮೂರ್ತಿಯಾಗುವಳು, ಒಬ್ಬ ಕಾಲು ಮುರಿಸಿಕೊಳ್ಳುವ ಇತ್ಯಾದಿ. ಮತ್ತು ೧೪ ವರುಷಗಳಲ್ಲಿ, ಚಂದ್ರನಾಥ ಮತ್ತು ನಿರಾಶೆಗಳಲ್ಲಿ ಸ್ತ್ರೀಯ ಸ್ವಚ್ಛಂದ ವೃತ್ತಿಯಿದೆ. ಆಕೆ ಪ್ರೇಮದಿಂದ ಒಬ್ಬನನ್ನು ಕಂಡರೆ ಕಾಮದಿಂದ ಇನ್ನೊಬ್ಬನಲ್ಲಿ ಆರಕ್ತೆ.

ಆದೇ ಎಸ್. ವಿ. ಜೇವೂರರ ಪುನರ್ಜನ್ಮದಲ್ಲಿ ಪ್ರೇಮ ಬೇರೆ ಬಗೆಯದಿದೆ. ಶಾಂತಾ ಮೂರ್ತಿಯ ಹೆಂಡತಿಯಾಗಿ ಮಹೇಶನ ರೋಗೋಪಚಾರಕ್ಕೆ ಹೋಗುವಳು. ಅವನು ಅಸಹಾಯ ಸ್ಥಿತಿಯಲ್ಲಿದ್ದು, ಸಾಯುವ ಮುಂದೆ ಪುನರ್ಜನ್ಮದಲ್ಲಿಯೂ ಎಂದು ಉದ್ಗಾರ ತೆಗೆಯುವನು. ಶಾಂತಾ ಹೂ ಗುಟ್ಟಿದಳೋ ಇಲ್ಲವೋ, ಹೂಗೊಡಬೇಕೋ ಇಲ್ಲವೋ ತಿಳಿಯದ ವಿಷಯವಾಗಿ ಕೊನೆಗೊಂಡಿದೆ.

ವೀರಭದ್ರ ಮ್ಯಾಗೇರಿಯವರ ರಾಧೆ ಕತೆಯ ವಸ್ತು ಹಳೆಯದು. ಸಂಗತಿ ಹಳೆಯದಿದ್ದರೂ ಹೇಳುವ ತಂತ್ರದಲ್ಲಿ ಹೊಸತನ ಬೇಕು. ಒಂದು ತಿಂಗಳ ಕೂಸನ್ನುಹಿತ್ತಲಲ್ಲಿ ಒಯ್ಯುವ ರಾಧೆಯ ಸಾಹಸವನ್ನು ನಾವು ಮೆಚ್ಚಲಾರೆವು. ಇದು ಅಕ್ಕನ ಮಕ್ಕಳ ಮೇಲಿನ ಪ್ರೇಮವೆನಿಸದೆ ಅವಿವೇಕವಾಗಿ ಕಂಡು ಬರುವದು. ಇವುಗಳಲ್ಲಿ ನಿ. ವ್ಯಾ. ಬಲ್ಲಾಳರ ತೆರೆಯ ಮರೆ ಒಂದಿಷ್ಟು ಒಳ್ಳೆಯದು.

ರಾಜ ಪ್ರೊಫೆಸರ. ಹೂವನ ಮನೆಯಲ್ಲಿದ್ದು ಅವನ ಮಗಳನ್ನುಮದುವೆಯಾಗ ಬಯಸಿರುವ. ಒಮ್ಮೆಲೆ ಊರಲ್ಲಿ ಹರತಾಳ. ರಾಜ ಸೆರೆಮನೆಗೆ ಸೇರಿದ. ಮಾವ ಕ್ಷಮ ಬೇಡೆಂದ. ಬೇಡಲಿಲ್ಲ. ತಿಂಗಳು ತುರಂಗವಾಸವನ್ನನುಭವಿಸಿ ಮರಳಿ ಬಂದ. ಇಷ್ಟು ಸಮಯದಲ್ಲಿ ಶಾಂತಿಯು ಕೈಬಿಟ್ಟಳು. ನವಕರಿಯೂ ಹೋಯಿತು. ಹೊಟ್ಟೆಯ ಪಾಡಿಗೆ ಬಂಗಾಲಕ್ಕೆ ಹೋದ. ಅಲ್ಲಿ ಉಷಾನನ್ನು ಮದುವೆಯಾದ.

ಕತೆಯಲ್ಲಿಯ ರಾಜ, ಮಾವ, ಶಾಂತಾ ದುರ್ಬಲ ಪಾತ್ರಗಳು. ಉಷಾ ಮಾತ್ರ ನಿಷ್ಕಾಮ ದೇಶಭಕ್ತಳು. ತುರಂಗಿಗೆ ಹೋಗುವದು, ಬಂಗಾಲಕ್ಕೆ ಬರಹಚ್ಚಿದುದು ಅಂತಃಪ್ರೇರಣೆ. ರಾಜನ ಸೇವೆಗೆ ಬರಮಾಡಿದುದು ಆ ಪ್ರೇರಣೆಯ ಸಿದ್ಧಿ ಮಾರ್ಗ. ರಾಜನ ಕೈಹಿಡಿಯುವದು ಆ ಸಿದ್ಧಿಯ ಫಲ. ಉಷಾ ಕತೆಯ ನಡುವೆ ಬಂದರೂ ನಕ್ಷತ್ರದಂತೆ ಹೊಳೆಯುವಳು. ತೆರೆಯ ಮರೆಯಲ್ಲಿ ಅವಳದೇ ಕೈವಾಡ. ವಿಧಿ ಮರೆಗೆ ನಿಂತು ಅವಳನ್ನು ವಿಧವೆಯಿಂದ ಗೃಹಿಣಿಯ ಪದಕ್ಕೆ ಏರಿಸುವದು. ನೀಳ್ಗತೆಯೆನಿಸಿದರೂ ೧೩ ಕತೆಗಳಲ್ಲಿ ಒಳ್ಳೆಯದೇ !

ತೀರದ ಆಸೆ, ಅವನ ಪಾಡು, ಬೀದಿಯ ಭಿಕಾರಿ, ಕೆಲಸ ಸಿಕ್ಕಿತೇ ರೇಶನ್ ಸರತಿಗಳು ಬಡತನದ ಭೀಕರ ಚಿತ್ರವನ್ನು ಚಿತ್ರಿಸುವವು. ಸಮಾಜದಲ್ಲಿ ಬಡವರನ್ನು ಸಾವುಕಾರರು ಮೋಸ ಮಾಡುವರು; ಆಸ್ಪತ್ರಿಯವರು ಗಣಿಸರು; ಮಕ್ಕಳು ಸಾವಿನ ಮಾರಿಗೆ ಈತ್ತಾಗುವರು ಇತ್ಯಾದಿ ಕತೆಯ ವಸ್ತು. ಮೂಲಕಿ ಮುಂಡ್ಯರ ಇಂದಿನ ಹೆಣ್ಣು ಕತೆಯೆನಿಸದೆ ಮನೆತನದ ಒಂದು ಚಿತ್ರವೆನಿಸುವದು. ಕತೆಗೆ ವಸ್ತು, ಪಾತ್ರವೈವಿಧ್ಯ, ಅವುಗಳಿಗೆ ಪೋಷಕವಾಗಿ ಭಾಷೆ—ಭಾವನೆಗಳ ಹುರಿಕಟ್ಟುಬೇಕು. ಸಿಂಪಿ ಲಿಂಗಣ್ಣನವರ ತ್ರಿಪಿಷ್ಠಿಯ ತಿರಕಪ್ಪ ಹೆಸರಿಗೆ ತಕ್ಕವ. ತ್ರಿಪಿಷ್ಠಿ ಜನರ ಬಾಳು ಹೀಗಿರುವದು ಸತ್ಯ. ಆದರೆ ಸಣ್ಣ ಕತೆಯೆಂದು ಕರೆಯಬೇಕಾದರೆ ಸ್ಥಳ, ಕಾಲ, ಪಾತ್ರಗಳಲ್ಲಿ ಏಕಸೂತ್ರತೆ ಬೇಕು. ಎಸ್. ಸೂರಪ್ಪನವರ ವೈದ್ಯನ ಕತೆಯು ರೋಮಾಂಚಕಾರಿಯಾದುದು. ಖಂಡೋಜಿರಾವ, ಭವಾನಿಯರು ಗಂಡ—ಹೆಂಡರು. ಭವಾನಿ ರಾತ್ರಿಯಲ್ಲಿ ಅರಿಯದೆ ಸ್ವಪ್ನರಾಣಿಯಂತೆ ಕುಣಿಯುವಳು. ಇದರಿಂದ ಗಂಡ ಹೆದರಿದ್ದ. ಹೆಂಡತಿಯನ್ನು ಅನೇಕ ವೈದ್ಯರಿಗೆ ತೋರಿಸಿದನು. ರೋಗ ತಿಳಿಯದು. ತಿರುಗಿ ಹೆಂಡತಿಯು "ಗಂಡನಲ್ಲಿಯ ಇದೊಂದು ರೋಗ" ವೆಂದು ಕರೆಯುವಳು. ಕಡೆಗೆ ಒಂದಿನ ಹೆಂಡತಿಯು ಗಂಡಸನ್ನು ಕಡಿದು ತಾನು ಪ್ರಾಣಬಿಡುವಳು. ಇದಕ್ಕೆ ಅಜ್ಜಿ ಹೇಳಿದ ತಂದೆಯ ಒಂದು ಸಂಗತಿಯು ಆಧಾರವಾಗಿ ನಿಲ್ಲುವದು. ಕತೆಯ ಸತ್ಯತೆಯನ್ನು ಅನುವಂಶಿಕ ಶಾಸ್ತ್ರಜ್ಞರು ನಿರ್ಣಯಿಸಬೇಕು. ಸಂಸ್ಥಾನದಲ್ಲಿಯ ಗುರುಗಳ ಚಿತ್ರವನ್ನು ದಲಕೆಯವರು ಸೊಗಸಾಗಿ ಬರೆದಿರುವರು.

ಗೋರೂರರ ರೋಡಎಂಜಿನಿಯರದ ಎಂಜಿನಿಯರನಿಗೆ ಒಬ್ಬ ಹೆಂಡತಿಯುಂಟು. ಹೆಂಡತಿ ಬಲು ತಗಲುಗಂಟಿ. ಕಡೆಗೆ ಇವನನ್ನು ತ್ಯಜಿಸುವಳು. ಇತ್ತ ಎಂಜಿನಿಯರನು ಮನೆಯನ್ನು ಬಿಡುವ. ಬೀದಿಯಲ್ಲಿಯ ಒಂದು ಎಂಜಿನು ನಡಿಸುವ. ಅಂದು ಅವನು ಎಂಜಿನೀಯರನು. ಅದೇ ಅವನ ಮನೆ. ಆ ಮನೆಗೆ ಭೂಷಣವಾಗಿ ಒಬ್ಬಳು ಸಿಕ್ಕುವಳು. ಗೆಳೆಯ ಒಬ್ಬಳೆನ್ನದೆ ಹೆಂಡತಿಯೆಂದು ತಿಳಿದು ಕೆನ್ನೆಗೆ ಏಟು ತಿಂದ. ಮಳೆಯ ನೀರನ್ನು ಬಿಟ್ಟು ಮಂಜಿನ ನೀರಿಗೆ ಕೈಯೊಡ್ಡಿದಂತೆ ಇವಳ ಜೊತೆಗೆ ಜೀವನವನ್ನು ಸಾಗಿಸಬೇಕು. ಹೆಸರನ್ನು ಮುಚ್ಚಿ ಕತೆಯನ್ನು ಓದಿದರೆ ಗೋರೂರರದೆಂದು ತಿಳಿಯುವದು ಸುಲಭವೆನಿಸದು.

ಮೈರೂಮ, ಪ್ರತಿಬಿಂಬ, ವಿಷಕನ್ಯೆ ಮತ್ತು ನನ್ನ ಧೈರ್ಯಗಳನ್ನು ಭಾವಕಥೆಯೆಂದು ಕರೆಯಬಹುದು. ಕಥೆಯಲ್ಲಿ ಭಾವಲಹರಿಯು ತಿಳಿತಿಳಿಯಾಗಿ ಬೆಳೆದು ಹುಚ್ಚು ಹೊಳೆಯಾಗಿ ಹರಿದು ಕಾಮನ ಬಿಲ್ಲಿನಂತೆ ಮೂಡಿ ನಿಲ್ಲುವದು. ಆದರೆ ಆ ಬಣ್ಣ ಎಷ್ಟು ಹೊತ್ತು ! ಓದಿ ಮುಗಿಯುವ ವರೆಗೆ ! ಕತೆಯ ವಸ್ತು ಇಷ್ಟು.

ಎನ್. ಗಣೇಶ ಚಿಪಳೂಣಕರರ ರಾಜುವಿನ ದೇವರಲ್ಲಿ ನಾವೀನ್ಯವಿದೆ. ವಿಷಯ ನಿರೂಪಣೆ ಹೊಸದು. ರಾಜು ಸಣ್ಣ ಹುಡುಗನಾದರೂ ತಾಯಿ ಹೇಳಿದ "ದೇವರು ದಯಾಳು ತಾಯಿಯಂತೆ ಇರುವನು." ಎಂಬ ಮಾತಿನ ಸತ್ಯತೆಗೆ ದಾರಿ ತಪ್ಪಿ ಅನೇಕ ಕಡೆಗೆ ಸಿಕ್ಕು ನೊಂದು ಗುರಿಯನ್ನು ಕಂಡುಕೊಳ್ಳುವನು. ದೊಡ್ಡ ಮಾತನ್ನು ಸಣ್ಣ ಹುಡುಗನ ಅಲ್ಪಜೀವನದಲ್ಲಿ ಅಳೆಯ ಹಚ್ಚಿದುದು ಕತೆಯ ಕೌಶಲ್ಯವೇ ಸರಿ ! ಆದರೆ ಅವರು ಆ ಕತೆಯನ್ನು ಅಂತರಂಗ, ಪ್ರಜಾಮತಗಳಲ್ಲಿ (ಎರಡು ಕಡೆಗೆ) ಯಾಕೆ ಮುದ್ರಿಸಿಕೊಂಡರೋ ? ಕನ್ನಡಕ್ಕೆ ಇನ್ನೊಂದು ಕತೆಯು ಸಿಗುವದನ್ನು, ಇನ್ನೊಬ್ಬ ಕತೆಗಾರನಿಗೆ ಸ್ಥಳ ದೊರೆಯುವದನ್ನು ತಾವು ಕಸಿದುಕೊಂಡಂತೆ—

[ಶ್ರೀ ಎನ್ ಗಣೇಶ ಚಿಪಳೂಣಕರ ಇವರ 'ರಾಜುವಿನ ದೇವರು' ಎಂಬ ಈ ಕತೆ ನಮ್ಮ ಪತ್ರಿಕೆಯ ೧೮—೬—೪೬ ನೆಯ ತಾರೀಖಿನ ಸಂಚಿಕೆಯಲ್ಲಿಯೇ ಪ್ರಸಿದ್ಧವಾಗಿದೆ. ಇದೇ ಕತೆಯನ್ನು ಲೇಖಕರು ಈಗ ಮತ್ತೆ ಪ್ರಜಾಮತ ಮತ್ತು ಅಂತರಂಗದಲ್ಲಿ ಪ್ರಸಿದ್ಧಿಸಿದ್ದಾರೆ. ಈ ಕತೆ ಮರಾಠಿ ಕತೆಯೊಂದರ ಅನುವಾದವೆಂದು ನಮ್ಮ ಗೆಳೆಯರೊಬ್ಬರು ಹೇಳುವರು. ] (ಸಂಪಾದಕರು)

ರಾಜರಸ್ತೆ. ಈ ಸಾರೆಯ ನಗೆಯ ಕತೆಗಳಲ್ಲಿ ಉತ್ತಮವಾದುದು. ಅಧಿಕಾರಿಗಳ ಕರ್ತವ್ಯ ಕರ್ಮದ ಅಣಕವನ್ನು ಮಾರ್ಮಿಕವಾಗಿ ರಾಮೂರು ಚಿತ್ರಿಸಿರುವರು.

## ಆಷಾಢ ಪಟ್ಟಿ

ಆಷಾಢ ಪಟ್ಟಿಕ್ಕೆ ಕೊನೆಗೆ ಎರಡು ಕತೆಗಳು ಉಳಿದವು.

೧. ರಕ್ತಸರೋವರ ಲೇ. ಕುಳಕುಂದ ಶಿವರಾಯ

ಇದೊಂದು ಇತ್ತಲಾಗಿ ಕಾಶ್ಮೀರದಲ್ಲಿ ನಡೆದ ಸತ್ಯಾಗ್ರಹದ ಕಲ್ಪಕಚಿತ್ರ. ಕಾಶ್ಮೀರ ಸರಕಾರವು ಹರಿಸಿದ ರಕ್ತಪ್ರಸಂಗವೇ ಕತೆಯ ವಸ್ತು. ಅದು—ಜೈನಬ್ಬಿಯು ಶೇಕನ ಹೆಂಡತಿಯು. ಶೇಕನು (ಶೇಕ ಅಬ್ದುಲ್ ರಹಿಮಾನನೇ ?) ಸತ್ಯಾಗ್ರಹ ತಂಡದ ಧುರೀಣ. ಕಾಶ್ಮೀರ ಸರಕಾರದ ಅಂಧ ಆಳಿಕೆಯು ಪ್ರಜೆಗಳ ಮೂಲಭೂತ ಸ್ವಾತಂತ್ರ್ಯಕ್ಕೆ ತಡೆಯಾಗಿ ನಿಲ್ಲುವದು. ರಾಜನನ್ನು ಪದಚ್ಯುತನನ್ನಾಗಿ ಮಾಡಬೇಕೆಂಬುದೇ ಕ್ರಾಂತಿವೀರರ ಬೀಜಮಂತ್ರ. ತರುಣರ ತಂಡವು ಅರಮನೆಯ ಕಡೆಗೆ ಧಾವಿಸುವದು. ಅರಮನೆ ಬಂದಿತು ! ಆದರೆ ಕಾವಲುಗಾರರು ಎಚ್ಚರಾಗಿ ನಿಲ್ಲುವರು. ಗುಂಡು ಹಾರಿಸುವರು. ವೀರರು ಹೆದರರು. ಮುಂದೆ, ನಡೆಮುಂದೆ ಎಂದು ಧಾವಿಸುವರು. ಒಂದೊಂದರಂತೆ ಗುಂಡಿಗೆ ಆಹುತಿಯಾಗಿ ೭೬ ಜನರು ಸಾಯುವರು. ಶೇಕನು ಹಾಗೇ ಮುಂದೆ ನಡೆವನು. ತನ್ನ ಸರದಿಯ ಗುಂಡು ಸುಂಯ್ ಗುಟ್ಟುತ್ತ ಬಂದರೂ ಹೆದರ-ಹಿಂಜರಿಯ. ಒಂದು ಹೆಜ್ಜೆ ಮುಂದಿಟ್ಟರ ಬೇಕು ! ಗುಂಡು ಎದೆಯನ್ನು ಸೇರಿತು. ಶೇಕನು ಬಿದ್ದನು. ಎಲ್ಲ ವೀರರ ಪ್ರಾಣಜ್ಯೋತಿ ದಿಗಂತದಲ್ಲಿ ವಿಲೀನವಾಗುವದು. ಇಂದಿಗೆ ಜೈನಬ್ಬಿ ಅನಾಥೆ ! ಆ ಅನಾಥೆಯ ದುಃಖ ವಾಚಕರಿಗೆಲ್ಲ ಹರಿದು ಬರುವದು.

ಕತೆಯ ವಸ್ತು ಸಾಮಾನ್ಯವೆನಿಸಿದರೂ ಭಾಷೆ ಹುರಿಗೊಂಡು ರಕ್ತವನ್ನು ಚಿಮ್ಮುತ್ತ ಸಾಗುವದು. ಪ್ರತಿಶಬ್ದ ಕ್ರಾಂತಿಯ ಕಿಡಿಯನ್ನು ಉಗುಳುತ್ತ ಮುಂದೆ ಮುಂದೆ ಎಳೆದು ತರುವದು. ಒಂದು ಕಡೆಗೆ ರಾಜರಕ್ಷಕರ ಅಗ್ನಿ ಹಸ್ತ ! ಇನ್ನೊಂದು ಕಡಗೆ ಸತ್ಯಾಗ್ರಹಿಗಳ ರಕ್ತ ಹಸ್ತ ! ಇವುಗಳ ಪರಿಣಾಮವೇನೆಂದು ಭಯವು ಮೋಸವಾಗಿ ನಿಂತು ನೋಡುವದು. ಪರಿಣಾಮವು ಹೀಗೆಂದು ತಿಳಿಯ ಬರುವಲ್ಲಿಯೇ ಕತೆಯು ಮುಗಿಯುವದು. ಸತ್ಯಾಗ್ರಹಿಗಳ ಪರಿಣಾಮ ಇಷ್ಟೇ ಎನಿಸಿದರೂ ಆದರ ಅಂತರ ಜ್ವಾಲೆ ಬಹುದೂರದ ವರೆಗೆ ಹಬ್ಬಿ ಭವಿಷ್ಯದಲ್ಲಿ ಹೇಗೆ ಸ್ಫೋಟವಾಗುವದೋ ಎಂದು ಬೆದರಿಕೆಯಲ್ಲಿ ಪರಿಸಮಾಪ್ತಿಯಾಗುವದು. ಕತೆಯಲ್ಲಿ ಕಂಡುಬರುವ ಜಾಣ್ಮೆಯಾದರೂ ಇಷ್ಟೇ !

೨. ಗೃಹಪ್ರವೇಶ ಲೇ. ಜಿ. ದಾಶರಥಿ ದೀಕ್ಷಿತ

ಕತೆಯ ವಾಸ್ತವತೆಯನ್ನು ಚರ್ಚಿಸುವ ಅವಶ್ಯಕತೆಯಿಲ್ಲ. ಲೇಖಕರು ಇದು ಸತ್ಯಕತೆಯೆಂದು ಹೇಳಿರುವರು. ಅದು ಸರಿಯಾದ ಮಾತು. ಇಂದಿನ ತರುಣ—ತರುಣಿಯರ ಮದುವೆಯ ದಿನ ನಿಜವಾಗಿ ನಡೆದು ಬರುವ ಸಂಗತಿ. ಸಂಗತಿಯು ಇಷ್ಟು ಸಾರ್ವತ್ರಿಕವೆನಿಸಿದರೂ ರಂಗಸ್ಥಳದ ತುಂಬ ಹಳೆಯ ಸಾಂಪ್ರದಾಯದವರ ಕುಣಿತ. ಕತೆಯ ಉದ್ದಕ್ಕೂ ಅವರದೇ ಮಾತು. ಕತೆಯ ಬೀಜಬಿಂದು ಮಾತ್ರ ನೂತನ ವಧು—ವರರು. ಅವರಾಡುವ ಮಾತು ಈ ಬಿಂದುವಿಗೆ ಎಸೆದ ಬಾಣಗಳು.

ಕತೆಯು ಇಷ್ಟು-ವಿಶಾಲ-ನರಸಮ್ಮನ ಮದುವೆ ಉಭಯ ಪಕ್ಷದವರ ಸಮ್ಮತಿಯಂತೆ, ವಧುವರರ ಒಲವಿನಂತೆ ಆಯಿತು. ಗಂಡಿನ ಅಯ್ಯಂಗಾರರು ವಧುವನ್ನು ಇಂದೇ ಕರೆದುಕೊಂಡು ಹೋಗಿ ಗೃಹ ಪ್ರವೇಶ ಮಾಡಿಕೊಳ್ಳುವೆವೆಂದು ಅನ್ನುವರು. ಹೆಣ್ಣಿನವರು ಆಗದೆನ್ನುವರು. ಇದೇ ಮಾತು ವಿಕೋಪಕ್ಕೆ ಹೋಗಿ "ನಾವು ಇವರ ಜೊತೆಗೆ ಬೀಗತನ ಮಾಡಬಾರದಿತ್ತು; ಇವರು ಸಾಂಪ್ರದಾಯಶೂನ್ಯರು; ಕೀಳರು; ಮಗಳು ಎಂಥ ಸುಖ ಉಣ್ಣುವಳೋ" ಇತ್ಯಾದಿ ಇತ್ಯಾದಿ ಬಾಯಿ ಹರಿಬಿಟ್ಟು ಜಗಳವಾಗುವದು. ಕತೆಯು ವಿಷಾದವಾಗಿ ಎಲ್ಲಿ ಪರಿಣಮಿಸುವದೋ ಎಂಬ ಮಟ್ಟಕ್ಕೆ ಬರುವದು. ಕಡೆಗೆ ೧೬ ದಿನ ಬಿಟ್ಟು ಮಾಡಿಕೊಳ್ಳಿರೆಂದು ಸಮ್ಮತಿಸುವರು. ಇಬ್ಬರಿಗೂ 'ಸಮ್ಮತ. ಸಂಜೆಯ ಕಾರ್ಯಕ್ಕಾಗಿ ವಧುವರರನ್ನು ಕರೆಯುವರು. ಇರುವದಿಲ್ಲ. ಗೊಂದಲ. ಹುಡುಕಿಸುವರು. ಕಡೆಗೆ ಇಬ್ಬರೂ ಸುಭದ್ರಾ ಸಿನೇಮಾವನ್ನು ನೋಡಹೋಗಿರುವರೆಂದು ಸುದ್ದಿ. ಮಂಗಳವಾಗುವದು. ಕತೆಯಲ್ಲಿ ಇದಕ್ಕೂ ಹೆಚ್ಚು ಏನು ಬಯಸಬೇಕು!

ಕತೆಯು ಚಿಕ್ಕದು. ಬಳಸಿದ ಮಾತು ತೂಗಿ ಕಟ್ಟಿದಂತೆ ಮಿತವಾದವುಗಳು. ಪಾತ್ರಗಳಾಡುವ ಒಂದೆರಡು ಮಾತುಗಳೇ ಸ್ವಭಾವದರ್ಶಕವಾದ ಕನ್ನಡಿಗಳು. ವಸ್ತುವಿನಲ್ಲಿ ಬುದ್ಧಿಗಮ್ಯ; ವಿಚಾರಗಮ್ಯ ಗೊಂದಲವಿಲ್ಲ. ತಿಳಿಹೊಳೆಯಂತೆ ಸರಳವಾದುದು. ಎಲ್ಲ ಪಾತ್ರ, ಪ್ರಸಂಗ ಗೃಹಪ್ರವೇಶದ ಒಂದಿನದ ನೆಳವಿನಲ್ಲಿ ತೇಲಿಕೊಂಡು ಬರುವಂತಹವು.

ಈ ಸಾರೆಯ ಕತೆಗಳಲ್ಲಿ ಗೃಹಪ್ರವೇಶವು ಪ್ರಥಮ ಸ್ಥಾನವನ್ನಲಂಕರಿಸುವದೆಂದು ಹೇಳಬೇಕಿಲ್ಲ.

## "ನಾಶ ಮಾಡೋಣ"

( ಹಿಂದೀ ಕತೆಯಿಂದ )

ಶ್ರೀನಂದನ, ಭಾಗ್ಯನಗರ.

"ಮಜಹಬ್ ನಹೀ ಸಿಖಾತಾ ಆಪಸ್ ಮೇ ಬೈರ ರಖನಾ, ಹಿಂದೀ ಹೈ ಹಮ್, ವತನ್ ಹೈ ಹಿಂದುಸ್ತಾನ್ ಹಮಾರಾ."

ಮಸೀದೆಯಲ್ಲಿಯ ಮುಸ್ಲಿಂ ಬಂಧುಗಳ ನಮಾಜ ನೋಡಿ ಹಿಂದುಗಳ ಚಿತ್ತಭ್ರಮೆಯಾಗುತ್ತದೆ. ಮಂದಿರಗಳಲ್ಲಿಯ ಆರತಿ, ಪೂಜೆಯನ್ನು ನೋಡಿ, ಮತ್ತು ಗಂಟೆಗಳ ಝೇಂಕಾರದಿಂದ ಮುಸಲ್ಮಾನರ ದೇವರು ಕಲ್ಮಷನಾಗುತ್ತಾನೆ. ಇಬ್ಬರೂ ಹಿಡಿಮುಡಿಗೊಳ್ಳುವರು. ಮನುಷ್ಯ ಮನುಷ್ಯರ ಈ ಭೇದವನ್ನು ನೋಡಿ ಮಂದಿರ ಮಸೀದೆಗಳೆರಡೂ ದುಃಖಿತವಾದವು. ಕಳವಳಗೊಂಡವು.

ಮಸೀದೆಗೆ ಮಂದಿರವೆಂದಿತು— "ತಂಗಿ, ಈ ಭೇದಭಾವವನ್ನು ನಾಶಮಾಡೋಣ—ಇಲ್ಲದಂತೆ ಮಾಡೋಣ."

ಮಸೀದೆ ಉತ್ತರಿಸಿತು— "ಅಣ್ಣನೇ, ಇದಕ್ಕೆ ನನ್ನ ಸಂಪೂರ್ಣ ಬೆಂಬಲವಿದೆ. ನಾನು ಸದಾ ಸಿದ್ಧಳಿರುವೆ ಈ ಕೆಲಸಕ್ಕೆ."

೦ ೦ ೦

ಮಸೀದೆಯಲ್ಲಿ ಒಂದು ಗಿಡ ಹುಟ್ಟಿತು. ಮಂದಿರದಲ್ಲಿ ಒಂದು ವೃಕ್ಷ ಜನ್ಮತಾಳಿತು. ಎರಡೂ ಬೆಳೆದು ದೊಡ್ಡವಾದವು. ಎರಡರ ಟೊಂಗೆಗಳು ಒಂದಕ್ಕೊಂದು ಕೂಡಿಕೊಂಡವು. ಅವೆರಡರ ಎಲೆಗಳು ಕೂಡಿ ನಲಿದಾಡತೊಡಗಿದವು.

ಮಸೀದೆಯಲ್ಲಿಯ "ನಮಾಜ"ನ್ನು ನೋಡಿ ಗಿಡವೆನ್ನುತ್ತಿತ್ತು— "ಮುಸ್ಲಿಂ ಬಂಧುಗಳೇ, ನನ್ನೆಡೆಗೆ ನೋಡಿರಿ. ಧರ್ಮಾಧರ್ಮಗಳ ಜಗಳಗಳನ್ನು ಬಿಡಿರಿ."

ದೇವತಾರ್ಚನೆಯ ಸಮಯದಲ್ಲಿ ವೃಕ್ಷವು ಕೂಗುತ್ತಿತ್ತು— "ಸ್ವಧರ್ಮ ಹಿಂದುಗಳೇ, ನಮ್ಮ ಈ ಗೆಳೆತನವನ್ನು ನೋಡಿ, ವೈಮನಸ್ಸನ್ನು ದೂರ ಮಾಡಿರಿ. ವೈರಿತನವನ್ನು ಧರ್ಮವು ಎಂದಿಗೂ ಕಲಿಸುವದಿಲ್ಲ."

ಇವುಗಳ ಮೂಕ ಸಂದೇಶವನ್ನು ಕೇಳುವರಾರು? ಕಿವಿಗಳಿದ್ದರೂ ಕಿವುಡರಂತೆ ನಟಿಸಿದರು. ಕಣ್ಣಿದ್ದರೂ ಕಾಣದಾದರು. ಮತಿ ಇದ್ದರೂ ತಿಳಕೊಳ್ಳದಾದರು.

ಒಂದು ದಿನ ಸಣ್ಣ ಮಾತಿನ ಸಲುವಾಗಿಯೇ ಹಿಂದೂ, ಮುಸ್ಲಿಂರಲ್ಲಿ ದಂಗೆಯೆದ್ದಿತು. ಆ ಸಮಯದಲ್ಲಿ ಹಿಂದುಗಳು ಮಸೀದೆಯಲ್ಲಿದ್ದ ಗಿಡದ ಕೋಮಲ ಟೊಂಗೆಗಳನ್ನು ಕಡಿದು ಕಡಿದು ಹಾಕಿದರು. ಮುಸಲ್ಮಾನರು ಮಂದಿರದ ವೃಕ್ಷವನ್ನು ನೆಲಕ್ಕುರುಳಿಸಿದರು. ಇದರಿಂದ ಮಂದಿರ ಮಸೀದೆಗಳಿಗೆ ಧಕ್ಕೆ ತಗಲಿತು. ದುಃಖಿತವಾದವು. ಆದರೆ ಮಾಡುವದೇನು? ಪಾಪ ಸುಮ್ಮನಿದ್ದವು!

ಕೆಲವು ದಿನಗಳು ಸಂದವು. ಭಾರಿ ಭೂಕಂಪವಾಯಿತು; ಒಂದು ದಿನ. ಮಂದಿರ ಮಸೀದೆಗಳೆರಡೂ ನೆಲಕ್ಕೆ ಕುಸಿದುಬಿದ್ದವು. ಅವುಗಳ ಇಚ್ಛೆ ಸಂಪೂರ್ಣವಾಯಿತು. ಸ್ನೇಹ ಬಂಧನದಲ್ಲಿ ಒಂದಕ್ಕೊಂದು ಕೂಡಿಕೊಂಡು ಇವೆ ಎಂಬಂತೆ ಭಾಸವಾಗುತ್ತಿತ್ತು. ಈಗಾದರೂ ಅವುಗಳ ಸಂದೇಶ ಯಾವುದು?

—ಜೈಹಿಂದ !

# ಭವಿಷ್ಯ

ಜ್ಯೋತಿಷಿ:-ಕೃಷ್ಣಶಾಸ್ತ್ರಿ ಭಿಡೆ, ಭವಿಷ್ಯಕಥನ ಕಾರ್ಯಾಲಯ, ಖಡೇಬಜ್ಜಾರ ಬೆಳಗಾವಿ

## ಸಪ್ಟಂಬರ ೨೩ ರಿಂದ ೨೯ ರ ವರೆಗೆ

### ಮೇಷ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ. ಆದರೆ ಮಕ್ಕಳಲ್ಲಿ ಮತ್ತು ಆಳುಮಕ್ಕಳಲ್ಲಿ ಕೆಲವರಿಗೆ ಸ್ವಲ್ಪ ಕ್ಲೇಶ. ಉಳಿದ ವಿಷಯುಗಳಲ್ಲಿಯೂ ಪ್ರಾಪಂಚಿಕ ಸುಖ ಸಾಧಾರಣವೆ. ಉದ್ಯೋಗದಲ್ಲಿ ಒಳ್ಳೇ ಪ್ರಗತಿ, ಲೌಕಿಕ ಬೆಳೆವುದು. ಮತ್ತು ಧನಲಾಭವೂ ಬಹಳ ಮತ್ತು ಅನಾವಶ್ಯಕ ಸಂಗತಿಗಳಲ್ಲಿ ಬಹಳ ವೆಚ್ಚ. ಮಾತಿನಲ್ಲಿ ಅಭದ್ರತನ ಬಹಳ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉತ್ತಮ ಅನುಕೂಲತೆಯಿದ್ದರೂ ನಿಮ್ಮ ಅಜ್ಞಾನಿತನದಿಂದ ಅದು ಕೆಡುವ ಸಂಭವ. ಹೆಂಡತಿಯ ತವರೂರಿನ ಜನರಲ್ಲಿ ಬಹಳ ವಿರೋಧ. ಪ್ರವಾಸ ಮತ್ತು ಭೆಟ್ಟಿ ಬಹಳ ಉತ್ತಮ. ಆದರೆ ಪತ್ರವ್ಯವಹಾರ ಮತ್ತು ಲೇಖೀ ಕೆಲಸ ಅಷ್ಟೇ ಕೆಟ್ಟ. ಅಶ್ವಿನಿಯ ಕೊನೆಯು ೨ ಮತ್ತು ಭರಣಿಯ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೩, ೨೪, ೨೮, ೨೯ ಅನುಕೂಲ.

### ವೃಷಭ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಕಿರುಕಳ ಕಾಯಿಲೆಯಿಂದ ಕೆಡುವದು. ಆದರೆ ಉಳಿದ ಎಲ್ಲ ಜನರ ಪ್ರಕೃತಿ ಚನ್ನಾಗಿ ಉಳಿದು ಪ್ರಾಪಂಚಿಕ ಸುಖ ಬಹಳ ಉತ್ತಮ. ಆದರೆ ಆಪ್ತರು ಮತ್ತು ನೆರೆಯವರು ನಿಮ್ಮ ಮೇಲೆ ಬಹಳ ಸಿಟ್ಟಿಗೇಳುವರು. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಉತ್ತಮ. ಒಂದು ಮಹತ್ವದ ಕೆಲಸದಲ್ಲಿ ಯಶಸ್ಸು. ಆದರೆ ದ್ರವ್ಯಲಾಭ ಕಡಮೆ. ಆದರೆ ವೆಚ್ಚ ಮಾತ್ರ ಹೆಚ್ಚು. ನಾನಾ ಪ್ರಕಾರದ ಚೈನಿಗೆ ಮನಸೆಳೆಯುವದು. ಪ್ರತಿಯೊಂದು ಕೆಲಸದಲ್ಲಿ ಮಿತ್ರರ ಅಡ್ಡಗಾಲು ಹಾಕುವ ಕಾಪಟ್ಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಹಿಮ್ಮೆಡ ವದು. ಬುದ್ಧಿ ಮತ್ತು ತೇಜಸ್ಸು ವಿಶೇಷ ಕಂಡು ಬರುವ ಮಾತಿನಲ್ಲಿ ನಿಮ್ಮ ಪ್ರಶಂಸೆ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಅನುಕೂಲ. ಕೃತಿಕೆಯ ಕೊನೆಯ ೨ ಮತ್ತು ರೋಹಿಣಿಯ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೨೫, ೨೬, ೨೯ ಅನುಕೂಲ.

### ಮಿಥುನ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಉತ್ತಮ ಆದರೆ ಮಕ್ಕಳಲ್ಲಿ ಒಬ್ಬರಿಗೆ ಬಹಳ ಕ್ಲೇಶ. ಪ್ರಾಪಂಚಿಕ ಸುಖ ಸಾಧಾರಣವೆ. ಆದರೆ ಒಬ್ಬ ವ್ಯಕ್ತಿಯ ಸಹವಾಸದಿಂದ ಮನಸ್ಸು ಆನಂದದಲ್ಲಿ ಸ್ಥಾವಂದಕ್ಕೆ ಬಹಳ ಹೆಚ್ಚಳ. ಪ್ರತಿಯೊಂದು ಕೆಲಸದಲ್ಲಿ ಅಲ್ಪಾಯಾಸದಿಂದ ಯಶಸ್ಸು. ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಮಿತ್ರರೊಡನೆ ನೀವೇ ತಿರಸ್ಕಾರ ಭಾವನೆಯಿಂದ ವರ್ತಿಸುವದರಿಂದ ಅವರಿಗೆ ಖೇದ. ಮತ್ತು ಸ್ಪರ್ಧೆಯಲ್ಲಿ ಉತ್ತಮ ಯಶಸ್ಸು ಆದರೆ ದೊಡ್ಡಸ್ತನದ ಡೌಲಿನಲ್ಲಿ ಬಹಳ ವೆಚ್ಚ ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಉತ್ತಮ. ಆರಿದ್ರಾದ ಕೊನೆಯ ೨ ಮತ್ತು ಪುನರ್ವಸುವಿನ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೩, ೨೪, ೨೭, ೨೮ ಅನುಕೂಲ.

### ಕರ್ಕ

ನಿಮ್ಮ ಮತ್ತು ಹೆಂಡತಿಯ ಪ್ರಕೃತಿ ಅನುಕೂಲ ಆದರೆ ಉಭಯತರಲ್ಲಿ ಮೇಲಿಂದ ಮೇಲೆ ಮತಭೇದ. ಮಕ್ಕಳು ಹಾಜೀಲ ಆಗ್ರಹದಿಂದ ವರ್ತಿಸುವರು. ಬಹುತರ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಯಥಾತಥ್ಯವೇ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ. ಮತ್ತು ಲಾಭ ಉತ್ತಮ, ದೊಡ್ಡಸ್ತನಕ್ಕಾಗಿ ಇಲ್ಲವೆ ಈರ್ಷೆಗಾಗಿ ಬಹಳ ವೆಚ್ಚ ಬಂಧುವರ್ಗದವರಲ್ಲಿ ಉತ್ಕರ್ಷ ಪ್ರವಾಸಕ್ಕಿಂತ ಭೆಟ್ಟಿ ಪತ್ರವ್ಯವಹಾರ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಪುಷ್ಯದ ಕೊನೆಯ ೨ ಮತ್ತು ಆಶ್ಲೇಷಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ ತಾ. ೨೩, ೨೪, ೨೫, ೨೭ ಅನುಕೂಲ.

### ಸಿಂಹ

ನಿಮ್ಮ ಪ್ರಕೃತಿ ಅನುಕೂಲ. ಆದರೆ ಹೆಂಡತಿಯ ಪ್ರಕೃತಿ ಕೆಟ್ಟದೆಂದು ತಕರಾರು ಇದ್ದು ಅಲ್ಲದೆ ಪ್ರತಿಯೊಂದರಲ್ಲಿ ಅವಳು ನಿಮ್ಮ ಮೇಲೆ ಬಹಳ ಸಿಟ್ಟಿಗೇಳವಳು. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಮತ್ತು ಮಕ್ಕಳಲ್ಲಿ ಅಭಿನವ ಉತ್ಕರ್ಷದ ಸಂಗತಿ ಸಂಭವಿಸುವದು. ಮನೆಯಲ್ಲಿಯ ಇಲ್ಲವೆ ಆಪ್ತರಲ್ಲಿಯ ವೃದ್ಧ ಜನರು ನಿಮ್ಮ ವ್ಯಾವಹಾರಿಕ ಪದ್ಧತಿಯಲ್ಲಿ ಬಹಳ ದೋಷವನ್ನು ತೋರಿಸಿಕೊಡುವ ಸಂಭವ. ವಾಹನದಿಂದ ತೊಂದರೆ ಇಲ್ಲವೆ ತತ್ಸಂಬಂಧದಲ್ಲಿ ಹಾನಿ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಲಾಭ ತುಂಬ. ಆದರೆ ಪ್ರತಿಷ್ಠೆಗಾಗಿ ಎಷ್ಟೋ ಜನರ ಮರ್ಜಿ ಹಿಡಿಯಬೇಕಾಗುವದು ಮತ್ತು ಅದಕ್ಕಾಗಿ ಬಹಳವೆಚ್ಚ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಅಯುತ್ತ ಹೊತ್ತಿಗೆ ಪ್ರತಿಕೂಲ ವಾತಾವರಣ ಪ್ರವಾಸ ಮತ್ತು ಪತ್ರವ್ಯವಹಾರ ಭೆಟ್ಟಿಗಿಂತ ಹೆಚ್ಚು ಅನುಕೂಲ. ಮಘಾದ ಕೊನೆಯ ೨ ಮತ್ತು ಪೂರ್ವಾದ ಮೊದಲನೆ ೨ ಚರಣಗಳಿಗೆ ಹೆಚ್ಚು ತೊಂದರೆ. ತಾ. ೨೩, ೨೪, ೨೫, ೨೬ ಅನುಕೂಲ.

### ಕನ್ಯಾ

ಎಲ್ಲರ ಪ್ರಕೃತಿ ಅನುಕೂಲ. ಆದರೆ ಮಿತ್ರರಲ್ಲಿ ಒಬ್ಬರಿಗೆ ಬಹಳ ಕ್ಲೇಶ ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಮತ್ತು ಕೆಲವೊಂದು ಮಂಗಲವರ್ಧಕ ಕೃತ್ಯ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ತುಂಬಾ. ಆದರೆ ವೆಚ್ಚವೂ ವಿಪರೀತ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಡಂಬಡಿಕೆ ಇಲ್ಲವೆ ಉಭಯಪಕ್ಷಗಳಲ್ಲಿ ಸಮಾನ ಸ್ಥಿತಿ. ಪ್ರವಾಸ ತೊಂದರೆಯದು. ಆದರೆ ಹೇತು ಸಾಧ್ಯವಾಗುವದು. ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಆದರೆ ಉತ್ತರಾದ ಕೊನೆಯ ೨ ಮತ್ತು ಹಸ್ತಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೫, ೨೬, ೨೭, ೨೮ ಅನುಕೂಲ.

### ತುಲಾ

ಪ್ರಕೃತಿ ಮತ್ತು ಸ್ತ್ರೀಸುಖ ಉತ್ತಮ. ಆದರೆ ಉಳಿದ ಪ್ರಾಪಂಚಿಕ ವಿಷಯುಗಳಲ್ಲಿ ಅನೇಕ ಕಿಟಕಿಟಿಯ ಪ್ರಶ್ನೆ ಉಪಸ್ಥಿತವಾಗುವ ಯೋಗ ಬಂಧುವರ್ಗದವರಲ್ಲಿ ಉಷ್ಣತೆ. ಆದರೆ ಮಕ್ಕಳಲ್ಲಿ ಒಬ್ಬರ ವಿಪರೀತ ಅಪಕರ್ಷ ಉದ್ಯೋಗದಲ್ಲಿ ಪ್ರತಿಷ್ಠೆ ಅನುಕೂಲ ಆದರೆ ಪ್ರಗತಿ ಮತ್ತು ಲಾಭ ಬಹಳ ಕಡಮೆ. ವೆಚ್ಚ ವಿಪರೀತ ಮತ್ತು ಅದರಲ್ಲಿಯ ಹೇತು ಅಸಾಧ್ಯ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಸ್ವಲ್ಪ ಅನುಕೂಲತೆಗಾಗಿ ಅಂದಾಜಗಿಂತ ಹೆಚ್ಚು ವೆಚ್ಚ. ಪ್ರವಾಸ ಮತ್ತು ಪತ್ರವ್ಯವಹಾರ ಬಹಳ ಕೆಟ್ಟ. ಆದರೆ ಭೆಟ್ಟಿ ಅನುಕೂಲ. ಮಿತ್ರತ್ವದಲ್ಲಿ ವಿರೋಧ. ಸ್ವಾತಿಯ ಕೊನೆಯ ೨ ಮತ್ತು ವಿಶಾಖಾದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ ೨೩—೨೪—೨೮ ಅನುಕೂಲ.

### ವೃಶ್ಚಿಕ

ಸ್ವತಃದ, ಹೆಂಡತಿಯ ಮತ್ತು ಮಕ್ಕಳ ಪ್ರಕೃತಿ ಅಲ್ಪಸ್ವಲ್ಪ ಕೆಡುವದು. ಆದರೆ ಪ್ರಾಪಂಚಿಕ ತೊಂದರೆ ಅನೇಕ ಬಗೆಯದು. ಉದ್ಯೋಗದಲ್ಲಿ ಪ್ರಗತಿ ಉತ್ತಮ ಮತ್ತು ಪ್ರತಿಷ್ಠೆ, ಲಾಭ ತುಂಬ ಆದರೆ ಒಂದಕ್ಕೆ ನಾಲ್ಕರಂತೆ ಆಯಾ ವಿಷಯಗಳಲ್ಲಿ ವೆಚ್ಚ ರೋಪಿ ಕೇವಿನಲ್ಲಿ ಹಾನಿ. ಮಿತ್ರ ಸುಖ ಅನುಕೂಲ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಹಿಮ್ಮೆಡುವದು. ಪ್ರವಾಸಾದಿ ಕೆಲಸ ಕಷ್ಟಸಾಧ್ಯ. ಅನುರಾಧೆಯ ಕೊನೆಯ ೨ ಮತ್ತು ಜೇಷ್ಠಾದ ಮೊದಲನೆ ೨ ಚರಣಗಳಿಗೆ ತೊಂದರೆ ಹೆಚ್ಚು. ತಾ. ೨೩—೨೪—೨೫—೨೬ ಅನುಕೂಲ

### ಧನು

ಪ್ರಕೃತಿ ಮತ್ತು ಸ್ತ್ರೀ ಸುಖ ಉತ್ತಮ. ಮಕ್ಕಳಲ್ಲಿ ಉತ್ಸಾಹವರ್ಧಕ ಸಂಗತಿಗಳು. ಪ್ರತಿಯೊಂದು ಕೆಲಸದಲ್ಲಿ ಮನಸಿನಂತೆ ಯಶಸ್ಸು. ನೇಕಾರರು ಸ್ವಲ್ಪ ಹಲಗರ್ಜೆ' ಮಾಡುವರು. ಉದ್ಯೋಗದಲ್ಲಿ ಉತ್ತಮ ಪ್ರಗತಿ, ದೊಡ್ಡ ಪ್ರತಿಷ್ಠೆ ಮತ್ತು ಅಪೇಕ್ಷೆಗಿಂತ ಹೆಚ್ಚು ದ್ರವ್ಯ ಲಾಭ. ಬಹಳ ಸಂಗ್ರಹ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉತ್ತಮ ಯಶಸ್ಸು. ಮಿತ್ರ ಸುಖ ಅಕಾಲಿಕ ಪ್ರವಾಸಾದಿ ಕೆಲಸ ಉತ್ತಮ, ಆದರೆ ಮೂಲಾದ ಕೊನೆಯ ೨ ಮತ್ತು ಪೂರ್ವಾಷಾಢಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೩—೨೪—೨೮—೨೯ ಅನುಕೂಲ.

### ಮಕರ

ನಿಮ್ಮ ಪ್ರಕೃತಿ ಅನುಕೂಲ ಆದರೆ ಹೆಂಡತಿಯದು ಕೆಡುವದು. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಸಾಧಾರಣವೆ. ಮಕ್ಕಳಿಂದ ಅಪ್ರಿಯ ವರ್ತನೆ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ ಮತ್ತು ಸ್ವಲ್ಪ ವೆಚ್ಚದಲ್ಲಿ ಬಹಳ ಕೆಲಸವಾಗುವ ಸುಯೋಗ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು. ಮಿತ್ರತ್ವದಲ್ಲಿ ಸ್ವಲ್ಪ ವಿರೋಧ ಪ್ರವಾಸಾದಿ ಕೆಲಸ ಅತಿ ಉತ್ತಮ. ಉತ್ತರಾಷಾಢಾದ ಕೊನೆಯ ೨ ಮತ್ತು ಶ್ರವಣಾದ ಮೊದಲನೆ ೨ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೨೫—೨೬—೨೭—೨೮ ಅನುಕೂಲ.

### ಕುಂಭ

ನಿಮ್ಮ ಪ್ರಕೃತಿಗೆ ಶಾರೀರಿಕ ತೊಂದರೆ ಇದ್ದರೆ ಹೆಂಡತಿಗೆ ಮಾನಸಿಕ ತೊಂದರೆ. ಉಳಿದ ವಿಷಯುಗಳಲ್ಲಿ ಪ್ರಾಪಂಚಿಕ ಸುಖ ಬಹಳ ಉತ್ತಮ. ಬಹಳ ಅವಚಿತ ಧನಲಾಭವಾಗುವ ಸಂಭವ. ಉದ್ಯೋಗದಲ್ಲಿ ಬಹಳ ಉತ್ಕರ್ಷ ಪ್ರತಿಷ್ಠೆ ಮಧ್ಯಮ ಆದರೆ ದ್ರವ್ಯ ಲಾಭ ತುಂಬ. ಗುಣವಂತರ ಸಹವಾಸ ಮಿತ್ರ ಸುಖ ಉತ್ತಮ. ಲಾಭ ಮತ್ತು ಭಾವೀ ಸೂಚಕ ಸ್ವಪ್ನಗಳು ಬಹಳ. ಭೆಟ್ಟಿ ಮತ್ತು ಪತ್ರವ್ಯವಹಾರಕ್ಕಿಂತ ಪ್ರವಾಸ ಉತ್ತಮ. ಶತತಾರಿಕೆಯ ಕೊನೆಯ ೨ ಮತ್ತು ಪೂರ್ವಾ ಭಾದ್ರಪದದ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೩—೨೪—೨೮—೨೯ ಅನುಕೂಲ.

### ಮೀನ

ಪ್ರಕೃತಿ ಸಾಧಾರಣವೆ. ಅದರಂತೆ ಮಕ್ಕಳದು. ಆದರೆ ಹೆಂಡತಿಯದು ಮಾತ್ರ ಉತ್ತಮ. ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ. ಆದರೆ ಲಾಭ ಉತ್ತಮ ಪ್ರತಿಯೊಂದು ವಿಷಯದಲ್ಲಿ ತಪ್ಪುತಿಳವಳಿಕೆಯಿಂದ ಬಹಳ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳ ಜೋರು ಹೆಚ್ಚು ಇದ್ದರೂ ನಿಮಗೆ ಯಶಃಪ್ರಾಪ್ತಿ. ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಉತ್ತರಾ ಭಾದ್ರಪದದ ಕೊನೆಯ ೨ ಮತ್ತು ರೇವತಿಯ ಮೊದಲನೆ ೨ ಚರಣಗಳಿಗೆ ತೊಂದರೆ ಕಡಮೆ. ತಾ. ೨೫—೨೬—೨೭ ಅನುಕೂಲ.

## ಹುಡುಗ ಅಥವಾ ಹುಡಿಗೆಯರ ಹುಟ್ಟು ತಂದೆ ತಾಯಿಗಳ ಇಚ್ಛೆಯಂತೆ

ವೆಂಕೋಬಾಚಾರ್ಯ ಉಪಾಧ್ಯಾಯ ಎಂ ಎಸ್ ಸಿ

ಜಗತ್ತು ಹುಟ್ಟಿದ ದಿನದಿಂದಲೇ ವಿಜ್ಞಾನವು ಬೆಳೆಯುತ್ತಿದ್ದರೂ ಅದು ಇನ್ನೂ ಶೈವದಲ್ಲಿಯೇ ಇದೆಯೆಂದು ವಿಜ್ಞಾನಿಗಳ ಅಭಿಪ್ರಾಯ. ಶೈವದಲ್ಲಿಯೇ ಅದ್ಭುತ ಕಾರ್ಯಗಳನ್ನು ಮಾಡಿರುವ ವಿಜ್ಞಾನ, ಬೆಳೆದು ಮುಂದೆ ಏನೇನು ಮಾಡುತ್ತಿದೆಯೋ ತಿಳಿಯದಾಗಿದೆ. ಇದಕ್ಕೆ ಈ ಕೆಳಗಿನದೇ ಒಂದು ಉದಾಹರಣೆ ಸಾಕು. ಮಾನವನ ಲೈಂಗಿಕ ಉತ್ಪತ್ತಿಯನ್ನು ವಿಜ್ಞಾನವು ತನ್ನ ಅಂಕಿತದಲ್ಲಿ ತರಲು ಪ್ರಯತ್ನಿಸತೊಡಗಿದೆ. ಮುಂದೆ ಬೆಳೆದು ಇದು ಸೃಷ್ಟಿಕರ್ತನ ಎಲ್ಲ ಅಧಿಕಾರಗಳನ್ನು ತೆಗೆದುಕೊಳ್ಳಬಹುದಾಗಿದೆಯೋ ಏನೋ!

ಈಚೆಗೆ ಮಕ್ಕಳು ಹುಟ್ಟುವುದಕ್ಕಿಂತ ಪೂರ್ವದಲ್ಲಿಯೇ ಗಂಡು ಅಥವಾ ಹೆಣ್ಣು ಎಂಬುದನ್ನು ತಿಳಿದುಕೊಳ್ಳುವ ವಿಷಯಕ್ಕೆ ಎಷ್ಟೋ ಸಂಶೋಧನೆಗಳು ನಡೆದಿವೆ. ತನ್ಮೂಲಕ ತಂದೆ ತಾಯಿಗಳಿಗೆ ತಮ್ಮ ಇಚ್ಛೆಯಂತೆ ಗಂಡು ಮಗುವನ್ನೊ, ಅಥವಾ ಹೆಣ್ಣುಮಗುವನ್ನೋ ಪಡೆಯಲು ಸಾಧ್ಯವಾಗಿದೆ.

ಈ ಸಂಶೋಧನೆಯ ಮುಖ್ಯ ತತ್ವವೇನೆಂದರೆ ಸ್ತ್ರೀ ಒಂದು ನಿಯತ ಅವಸ್ಥೆಯ ವರೆಗೆ ಕ್ಷಾರ ಪ್ರಕೃತಿಯವಳಾಗಿದ್ದರೆ ಗಂಡು, ಮತ್ತು ಅಮ್ಲ ಪ್ರಕೃತಿಯವಳಾಗಿದ್ದರೆ ಹೆಣ್ಣು ಹೆರುವಳು ಎಂದು ಊಹಿಸಲಾಗಿದೆ. ಅಮೇರಿಕೆಯಲ್ಲಿ ಈ ವಿಧಾನಕ್ಕೆ 'ಎಸಿಡ್ ಸೋಡಾ ವಿಧಾನ'ವೆಂದು ಹೆಸರು. ನ್ಯೂಯಾರ್ಕಿನ ಡಾಕ್ಟರ ಮೋರಲಿವಿನ್‌ಸ್ಕಿಯವರು ಈ ವಿಧಾನವನ್ನು ಹನ್ನೆರಡು ದಂಪತಿಗಳ ಮೇಲೆ ಪ್ರಯೋಗ ಮಾಡಿ ಮೇಲೆ ತಿಳಿಸಿದ ತತ್ವವನ್ನು ಅನುಭವದಿಂದ ಸಿದ್ಧಿಸಿ ತೋರಿಸಿದ್ದಾರೆ.

ನ್ಯೂಯಾರ್ಕಿನ ಇನ್ನೊಬ್ಬ ಡಾಕ್ಟರರಾದ ಜೇಕಸ್ ಬೆಹರ್ ಎಂಬವರು ಮೇಲೆ ತಿಳಿಸಿದ ವಿಧಾನಕ್ಕೆ ತಮ್ಮ ಅನುಮತಿ ಕೊಟ್ಟಿದ್ದಲ್ಲದೆ, ತಮ್ಮದೇ ಆದ ಒಂದು ಅಭಿಪ್ರಾಯವನ್ನು ಕೆಳಗಿನಂತೆ ವ್ಯಕ್ತಪಡಿಸಿದ್ದಾರೆ.

"ಸ್ತ್ರೀಯು ಗಂಡು ಮಗುವನ್ನು ಪಡೆಯಲಿಚ್ಛಿಸಿದರೆ, ಅವಳು ಗರ್ಭಿಣಿಯಾಗುವ ಮೊದಲು ಕ್ಷಾರವುಳ್ಳ ಆಹಾರ ಪದಾರ್ಥಗಳನ್ನು (ಸೇಬು, ಬಾಳೇಹಣ್ಣು, ಗಜ್ಜರೆ ಮುಂದಾದವುಗಳನ್ನು) ಹೆಚ್ಚಾಗಿ ಸೇವಿಸಬೇಕು. ಹೆಣ್ಣುಮಗುವನ್ನು ಬಯಸಿದರೆ, ಅಮ್ಲವನ್ನು ಹುಟ್ಟಿಸುವ ಆಹಾರ ಪದಾರ್ಥಗಳನ್ನು (ಮೀನ, ಮೊಟ್ಟೆ, ಜವೆಗೋದಿ) ಹೆಚ್ಚಾಗಿ ಸೇವಿಸಬೇಕು.

ಲೈಂಗಿಕ ನಿಗ್ರಹದ ವಿಷಯಕ್ಕೆ ಇನ್ನೂ ಎಷ್ಟೋ ಹಳೆಯ ವಿಚಾರಗಳನ್ನು ಕೆಳಗೆ ತಿಳಿಸಿದೆ.

ಗಂಡಸು ಬಿಸಲಿನಲ್ಲಿ ಹೆಚ್ಚು ತಿರುಗಾಡಿದರೆ ಅವನ ಹೆಂಡತಿ ಹೆಣ್ಣು ಹೆರುವಳು ಎಂದು, ನೆರಳಿನಲ್ಲಿ ಹೆಚ್ಚು ವಾಸಿಸಿದ್ದರೆ ಗಂಡು ಹೆರುವಳು ಎಂದು ಊಹಿಸಲಾಗಿದೆ. ಇದಲ್ಲದೆ ಮದುಮಗಳು ಗಂಡುಮಗುವನ್ನು ಪಡೆಯುವ ಇಚ್ಛೆ ಇಟ್ಟುಕೊಂಡಿದ್ದರೆ, ಅವಳು ಮಿಲನದ ಒಂದು ರಾತ್ರಿ ಮೊದಲು ತನ್ನ ಸಂಗಡ ಒಂದು ಗಂಡುಮಗುವನ್ನು ಮಲಗಿಸಿಕೊಳ್ಳಬೇಕು. ಈ ಸಂಪ್ರದಾಯವು ಸ್ವೀಡನ್‌ದಲ್ಲಿ ಮೊದಲಿನಿಂದಲೂ ನಡೆಯುತ್ತ ಬಂದಿದೆ.

ಒಂದು ವೇಳೆ ಗಂಡಸು ಬೂಟು ಹಾಕಿಕೊಂಡು ಹಾಸಿಗೆಯ ಮೇಲೆ ಹೋದರೆ, ಗಂಡುಮಗು ಹುಟ್ಟುವುದೆಂದು ನ್ಯೂ ಇಂಗ್ಲಂಡದಲ್ಲಿಯ ಜನರ ಅಭಿಪ್ರಾಯ. ಇದಲ್ಲದೆ ಗಂಡಸಿನ ವಯಸ್ಸು ಹೆಂಗಸಿಗಿಂತ ಐದು ವರ್ಷ ಹೆಚ್ಚು ಇದ್ದಲ್ಲಿ ಗಂಡು ಮಗು ಹುಟ್ಟುವುದೆಂದು ಮತ್ತು ಗಂಡಸು ನಿಶೆಯ ಅವಸ್ಥೆಯಲ್ಲಿ ಕ್ರೀಡಿಸಿದರೆ ಹೆಣ್ಣುಮಗು ಹುಟ್ಟುವುದೆಂದು ಭಾವಿಕರು ನಂಬುತ್ತಾರೆ.



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ ರಾಷ್ಟ್ರೀಯ ವಾಙ್ಮಯ ಪ್ರಕಾಶನ ಟ್ರಸ್ಟಿನ ಪರವಾಗಿ ಹ. ರಾ. ಮೋಹರೆಯವರಿಂದ ಮುದ್ರಿಸಿ ಪ್ರಕಟವಾಯಿತು.